## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ :** ಭದ್ರಾವತಿ ನಗರದ ರೈಲು ನಿಲ್ದಾಣದ ಹತ್ತಿರ ಬರುವ ಎಲ್.ಸಿ. ಸಂಖ್ಯೆ 32 ರ ಬದಲಿಗೆ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** 1) ದಿನಾಂಕ :19.11.2007 ಸಂಖ್ಯೆ :ಮೂಅಇ 126 ರಾರಾಹೆ 06 ರ ಸರ್ಕಾರಿ ಪತ್ರ.

2) ದಿನಾಂಕ :14.7.2008 ರಂದು ನಡೆದ ರಸ್ತೆ ಮೇಲು ಸೇತುವೆ/ಕೆಳಸೇತುವೆಗಳ ಚಾಲನಾ ಸಮಿತಿಯ ಸಭೆಯ ನಡವಳಿ

3) ದಿನಾಂಕ :17.6.2009ಸಂಖ್ಯೆ :ಸಂಕದ :22 :ಬಿಆರ್‌ಜಿಆರ್:ಓಬಿ:ಎಲ್‌ಸಿ–32 :ಭದ್ರಾವತಿ:2009–10 ರ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದ), ಲೋಕೋಪಯೋಗಿ ಇಲಾಖೆ, ಬೆಂಗಳೂರು ರವರ ಪತ್ರ.

**ಪ್ರಸ್ತಾವನೆ:**

ಭದ್ರಾವತಿ ರೈಲು ನಿಲ್ದಾಣದ ಬಳಿ ಎಲ್.ಸಿ.ಸಂ., 32ರ ಬದಲಿಗೆ ರಸ್ತೆ ಮೇಲು ಸೇತುವೆ ಹಾಗೂ ಕೂಡು ರಸ್ತೆಯ ಕಾಮಗಾರಿಯನ್ನು ಒಳಗೊಂಡು ಒಟ್ಟು ರೂ. 11,99,22,062/–ಗಳ ಅಂದಾಜು ಮೊತ್ತದ ಕಾಮಗಾರಿಯನ್ನು ರೈಲ್ವೆ ಇಲಾಖೆಯು ಕೈಗೆತ್ತಿಕೊಳ್ಳಲು ಮೇಲೆ ಓದಲಾದ (1) ರ ಸರ್ಕಾರಿ ಪತ್ರದಲ್ಲಿ ಅನುಮತಿಯನ್ನು ನೀಡಲಾಗಿತ್ತು.

2) ರಸ್ತೆ ಮೇಲು ಸೇತುವೆ/ಕೆಳಸೇತುವೆಗೆ ಅಪ್ರೋಚ್ ರಸ್ತೆಗಳನ್ನು ನಿರ್ಮಿಸಲು ಭೂಸ್ವಾಧೀನ, ಯುಟಿಲಿಟಿ ಸ್ಥಳಾಂತರಗಳ ಸಮಸ್ಯೆಗಳು ಉಂಟಾಗುವುದರಿಂದ ಅವುಗಳಿಗೆ ಸಂಬಂಧಪಟ್ಟ ಅಪ್ರೋಚ್ ರಸ್ತೆಗಳನ್ನು ಲೋಕೋಪಯೋಗಿ ಇಲಾಖೆಗೆ ವಹಿಸಬೇಕೆಂದು ರೈಟ್ಸ್ ಇಲಾಖೆಯು ತಿಳಿಸಿದ್ದರಿಂದ ಅಪ್ರೋಚ್ ರಸ್ತೆಗಳನ್ನು ಲೋಕೋಪಯೋಗಿ ಇಲಾಖೆಯಿಂದಲೇ ಕೈಗೆತ್ತಿಕೊಳ್ಳಬೇಕೆಂದು ಮೇಲೆ ಓದಲಾದ (2)ರ ಚಾಲನಾ ಸಮಿತಿಯ ಸಭೆಯಲ್ಲಿ ನಿರ್ಣಯಿಸಲಾಯಿತು.

3) ರೈಲ್ವೆ ಇಲಾಖೆಯಿಂದ ರಸ್ತೆ ಮೇಲು ಸೇತುವೆಯ ಕಾಮಗಾರಿಯ ಕಾರ್ಯವು ಪ್ರಗತಿಯಲ್ಲಿದ್ದು, ಅಪ್ರೋಚ್ ರಸ್ತೆಯ ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆಯ ವತಿಯಿಂದ ಪ್ರಾರಂಭಿಸಲು ಟೆಂಡರ್ ಕರೆಯಬೇಕಾಗಿದ್ದು ಹಾಗೂ ಸದರಿ ಕಾಮಗಾರಿಗೆ ಮೆ:ರೈಟ್ಸ್ ಸಂಸ್ಥೆಯು ತಯಾರಿಸಿರುವ ರೂ. 12.60 ಕೋಟಿಗಳ ಪರಿಷ್ಕೃತ ಮೊತ್ತದ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆಯನ್ನು ಮತ್ತು ಸೂಕ್ತ ಅನುದಾನವನ್ನು ಬಿಡುಗಡೆ ಮಾಡುವುದರ ಜೊತೆಗೆ ಈ ಕಾಮಗಾರಿಯು ವೆಚ್ಚ ಹಂಚಿಕೆ ಕಾಮಗಾರಿಯಾಗಿರುವುದರಿಂದ ಶೇ 50 ರಷ್ಟು ಮೊತ್ತವನ್ನು ರೈಲ್ವೆ ಇಲಾಖೆಯಿಂದ ಪಡೆಯುವ ಷರತ್ತಿನೊಂದಿಗೆ ಅನುಮೋದನೆ ನೀಡಬೇಕೆಂದು ಲೋಕೋಪಯೋಗಿ ಇಲಾಖೆಯ (ದ) ಮುಖ್ಯ ಇಂಜಿನಿಯರವರು ಮೇಲೆ ಓದಲಾದ (3)ರ ಪತ್ರದಲ್ಲಿ ಕೋರಿರುತ್ತಾರೆ.

4) ಈ ಅಂಶಗಳೆಲ್ಲವನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಮೂಅಇ 27 ರಾರಾಹೆ 2008, ಬೆಂಗಳೂರು, ದಿನಾಂಕ:22ನೇ ಸೆಪ್ಟೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಭದ್ರಾವತಿ ನಗರದ ರೈಲು ನಿಲ್ದಾಣದ ಹತ್ತಿರ ಬರುವ ಎಲ್.ಸಿ.ಸಂಖ್ಯೆ 32 ರ ಬದಲಿಗೆ ರಸ್ತೆ ಮೇಲು ಸೇತುವೆಯ ಅಪ್ರೋಚ್ ರಸ್ತೆ ನಿರ್ಮಾಣದ ಕಾಮಗಾರಿಯನ್ನು ಲೋಕೋಪಯೋಗಿ ಇಲಾಖೆ ವತಿಯಿಂದ ಕೈಗೆತ್ತಿಕೊಳ್ಳಲು ಮೆ:ರೈಟ್ಸ್ ಸಂಸ್ಥೆಯು ತಯಾರಿಸಿರುವ ಪರಿಷ್ಕೃತ ಅಂದಾಜು ರೂ. 12,60 ಕೋಟಿಗಳ ಮೊತ್ತದ ಕಾಮಗಾರಿಗೆ ಈ ಕೆಳಕಂಡ ಷರತ್ತಿನೊಂದಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

(i) The Railway will bare 50% of the total cost of the RoB/RuB including approaches. The total cost include the cost of diversion of road, Sewers, Cables, Gas and Water Mains etc., but would exclude the cost of the acquisition of any land and structures there on required for approaches or diversion.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 5465–01–190–3–04–211–ಕೆ–ರೈಡ್ ರಸ್ತೆ ಮೇಲು ಸೇತುವೆ /ಕೆಳಸೇತುವೆ ಯೋಜನೆ ಇದರಡಿ 2009–10ನೇ ಸಾಲಿನಲ್ಲಿ ಆಯವ್ಯಯದಲ್ಲಿ ಒದಗಿಸಿರುವ ರೂ. 30.00 ಕೋಟಿ (ರೂಪಾಯಿ ಮೂವತ್ತು ಕೋಟಿ ಮಾತ್ರ) ಗಳಿಂದ ಭರಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2256

**ಎನ್. ಮಂಜುಳಗೀತ**

ಸರ್ಕಾರದ ಅಧೀನ ಕಾರ್ಯದರ್ಶಿ

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಕನ್ನಡ ಮತ್ತು ಸಂಸ್ಕೃತಿ ಇಲಾಖೆಯವತಿಯಿಂದ ಆಡಳಿತ ಕನ್ನಡ ಭಾಷಾ ಕಮ್ಮಟ ಏರ್ಪಡಿಸುವ ಬಗ್ಗೆ.

**ಓದಲಾಗಿದೆ :** 1) ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ :ಕಸನಿ/14/ಕಅ/2009–10 ದಿನಾಂಕ :8.7.2009.

2) ಸರ್ಕಾರದ ಆದೇಶ ಸಂ :ಕಸಂವಾಪ್ರ 74 ಸ್ವೀಮರ 2009 ದಿನಾಂಕ 11.5.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:8.7.2009ರ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರು ಕೇಂದ್ರ ಕಛೇರಿ ಹಾಗೂ 29 ಜಿಲ್ಲೆಗಳಲ್ಲಿ ಒಂದು ಆಡಳಿತ ಕನ್ನಡ ಭಾಷಾ ಕಮ್ಮಟ ಏರ್ಪಡಿಸಲು ಮೇಲೆ (2)ರಲ್ಲಿ ಓದಲಾದ ದಿನಾಂಕ:11.5.2009ರ ಸರ್ಕಾರದ ಆದೇಶದಲ್ಲಿ ರೂ. 5.00 ಲಕ್ಷಗಳ ಅನುದಾನವನ್ನು ಹಂಚಿಕೆ ಮಾಡಲಾಗಿದೆ. ಅದರನ್ವಯ ಈಗಾಗಲೇ 29 ಜಿಲ್ಲೆಗಳಿಗೆ ಒಂದು ಆಡಳಿತ ಕನ್ನಡ ಭಾಷಾ ಕಮ್ಮಟ ಏರ್ಪಡಿಸಲು ತಲಾ ರೂ. 15,000/ಗಳಂತೆ ಒಟ್ಟು ರೂ 4.35 ಲಕ್ಷಗಳನ್ನು ಬಿಡುಗಡೆ ಮಾಡಲಾಗಿದೆ. ಈ ಬಾಬ್ತಿನಲ್ಲಿ ಉಳಿಕೆ ಮೊತ್ತ ರೂ. 65,000/–ಗಳಲ್ಲಿ ಕೇಂದ್ರ ಕಛೇರಿಯಲ್ಲಿ 1 ದಿನದ ಕಮ್ಮಟ ಏರ್ಪಡಿಸಲು ಯೋಜಿಸಲಾಗಿದ್ದು ಈ ಮೊತ್ತವನ್ನು ಅನುದಾನವಾಗಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಬಿಡುಗಡೆ ಮಾಡಲು ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ:ಕಸಂವಾಪ್ರ 110 ಕಸನಿ 2009, ಬೆಂಗಳೂರು, ದಿನಾಂಕ:15ನೇ ಸೆಪ್ಟೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಕೇಂದ್ರ ಕಛೇರಿಯಲ್ಲಿ 1 ದಿನದ ಆಡಳಿತ ಕನ್ನಡ ಭಾಷಾ ಕಮ್ಮಟ ಏರ್ಪಡಿಸಲು ತಗಲುವ ವೆಚ್ಚ ರೂ. 65, 000/– (ರೂಪಾಯಿ ಅರವತ್ತೈದು ಸಾವಿರ ಮಾತ್ರ)ಗಳನ್ನು 2009–10ನೇ ಸಾಲಿನ ಲೆಕ್ಕ ಶೀರ್ಷಿಕೆ 2205–00–001–0–01–059 (ಯೋಜನೆ) ಅಡಿಯಲ್ಲಿ ಭರಿಸಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರಿಗೆ ಸರ್ಕಾರದ ಅನುಮತಿ ನೀಡಲಾಗಿದೆ.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಟಿಪ್ಪಣಿ ಸಂಖ್ಯೆ:ಶಿಇ 2124 ಐಎಫ್ (ಬಿ & ಎ) 2009, ದಿನಾಂಕ:28.8.2009ರಲ್ಲಿ ಪಡೆದು ಹಾಗೂ ಇಲಾಖಾ ಕಾರ್ಯದರ್ಶಿಗಳಿಗೆ ನೀಡಲಾದ ಅಧಿಕಾರ ಪ್ರತ್ಯಾಯೋಜನೆ ಅನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2257

**ಎಂ.ಕೆ. ಧರ್ಮರಾಜಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ವಿಷಯ :** ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಡಿಜಿಟಲ್ ಡ್ಯೂಪ್ಲಿಕೇಟಿಂಗ್ ಯಂತ್ರ ಖರೀದಿಸಲು ಅನುದಾನ ನೀಡುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆರವರ ಪತ್ರ ಸಂಖ್ಯೆ : ಕಸನಿ :57:ದಾಸ್ತಾನು :2008–09, ದಿನಾಂಕ :9.6.2009

**ಪ್ರಸ್ತಾವನೆ:**

ಮೇಲೆ ಓದಲಾದ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ದಿನಾಂಕ:9.6.2009ರ ಪತ್ರದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಡಿಜಿಟಲ್ ಡ್ಯೂಪ್ಲಿಕೇಟಿಂಗ್ ಯಂತ್ರವನ್ನು ಖರೀದಿಸಲು 2008–09ನೇ ಸಾಲಿನಲ್ಲಿ ಹಣದ ಲಭ್ಯತೆ ಹಾಗು ಕಾಲಾವಕಾಶದ ಕೊರತೆಯಿಂದ ಪ್ರಸ್ತಾವನೆ ಸಲ್ಲಿಸಲು ಸಾಧ್ಯವಾಗಿರುವುದಿಲ್ಲವೆಂದು, ಪ್ರಸ್ತುತ 2009–10ನೇ ಸಾಲಿನ ಆಯವ್ಯಯದಲ್ಲಿ ಈ ಉದ್ದೇಶಕ್ಕಾಗಿ ರೂ. 1,35,335.00 ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಕಸಂವಾಪ್ರ 81 ಕಸನಿ 2009, ಬೆಂಗಳೂರು, ದಿನಾಂಕ:22ನೇ ಸೆಪ್ಟೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಗೆ ಡಿಜಿಟಲ್ ಡ್ಯೂಪ್ಲಿಕೇಟಿಂಗ್ ಯಂತ್ರವನ್ನು ಖರೀದಿಸಲು ರೂ. 1,35,335.00ಗಳನ್ನು (ರೂಪಾಯಿ ಒಂದು ಲಕ್ಷದ ಮೂವತ್ತೈದು ಸಾವಿರದ ಮುನ್ನೂರ ಮೂವತ್ತೈದು ಮಾತ್ರ)ಗಳನ್ನು ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಬೆಂಗಳೂರು ಇವರಿಗೆ ಬಿಡುಗಡೆ ಮಾಡಲು ಸರ್ಕಾರದ ಅನುಮತಿ ನೀಡಲಾಗಿದೆ.

ಈ ಕಾಮಗಾರಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕ ಕಾಯ್ದೆ 1999 ಮತ್ತು ಅದರ ನಿಯಮಗಳು 2000ನ್ನು ಅನುಸರಿಸಿ ಕ್ರಮ ವಹಿಸುವುದು.

ಈ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 2205–00–001–0–01–059 (ಯೋಜನೆ) ಇದರಡಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಶಿಇ 2213 ಐಎಫ್ (ಬಿ&ಎ) 2009, ದಿನಾಂಕ:10.9.2009ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2258

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

## ಇಂಧನ ಸಚಿವಾಲಯ

### ಸೇರ್ಪಡೆ

**ಸಂಖ್ಯೆ:ಇಎನ್ 53 ಎನ್‌ಸಿಇ 2008, ಬೆಂಗಳೂರು, ದಿನಾಂಕ:22ನೇ ಸೆಪ್ಟೆಂಬರ್, 2009**

ಸರ್ಕಾರಿ ಆದೇಶ ಸಂಖ್ಯೆ:ಇಎನ್ 53 ಎನ್‌ಸಿಇ 2008 ದಿನಾಂಕ:16.7.2009ರ ಆದೇಶ ಭಾಗದ ಮೊದಲನೆ ಕಂಡಿಕೆಯಲ್ಲಿ ಈ ಕೆಳಗಿನಂತೆ ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

"Power House-Longitude: $74^0$49'32" Latitude:$16^0$10'34"

Weir-Longitude:$74^0$48'54" Latitude:$16^0$10"24"

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2264

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ :19.1.2009.
2) ಸರ್ಕಾರಿ ಆದೇಶ ಸಂಖ್ಯೆ :ಮಾತಂಇ 39 ಅಚವಿ 2008 [1], ದಿನಾಂಕ :4.2.2009.
3) ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008 [2] ದಿನಾಂಕ :4.2.2009
4) ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ :30.3.2009.
5) ಸರ್ಕಾರಿ ಆದೇಶ ಸಂಖ್ಯೆ ಮಾತಂಇ 39 ಅಚವಿ 2008, ದಿನಾಂಕ :22.6.2009.
6) ನಿರ್ದೇಶಕರು ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಹಾಗೂ ಅಧ್ಯಕ್ಷರು, ಬಿಪಿಓ ಸ್ಕ್ರೀನಿಂಗ್ ಕಮಿಟಿ ಇವರ ಪತ್ರದ ಸಂಖ್ಯೆ :ಕೆಬಿಟ್ಸ್/ಪಿಇ/ಗ್ರಾಮೀಣ ಬಿಪಿಓ ಕೇಂದ್ರ/42/09–10, ದಿನಾಂಕ :23.9.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಒಂದು ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆಯುಳ್ಳ ತಾಲ್ಲೂಕು/ಹೋಬಳಿ ಕೇಂದ್ರ ಸ್ಥಳಗಳಲ್ಲಿ ಗ್ರಾಮಾಂತರ ಬಿ.ಪಿ.ಓ. ಕೇಂದ್ರಗಳನ್ನು ಸ್ಥಾಪಿಸುವ ಹೊಸ ಯೋಜನೆಗೆ 2008–09ನೇ ಸಾಲಿನಿಂದ ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆ.

ಮೇಲೆ [2]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ ಮಾರ್ಗಸೂಚಿಗಳನ್ನು ಹೊರಡಿಸಲಾಗಿದೆ ಹಾಗೂ ಅರ್ಜಿಯ ನಮೂನೆಯನ್ನು ನಿಗದಿಪಡಿಸಲಾಗಿದೆ.

ಮೇಲೆ [3] ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಸಂಬಂಧದ ಅರ್ಜಿಗಳನ್ನು ಪರಿಶೀಲಿಸಿ, ಸರ್ಕಾರಕ್ಕೆ ಅರ್ಹ ಅರ್ಜಿಗಳನ್ನು ಶಿಫಾರಸ್ಸು ಮಾಡುವ ಸಂಬಂಧ ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ಸ್ಕ್ರೀನಿಂಗ್ ಕಮಿಟಿಯನ್ನು ರಚಿಸಲಾಗಿದೆ.

ಮೇಲೆ [4] ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಉದ್ದೇಶಕ್ಕಾಗಿ 2008–09ನೇ ಸಾಲಿನಲ್ಲಿ ರೂ. 100 ಲಕ್ಷಗಳನ್ನು ಕೆಬಿಟ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

ಮೇಲೆ [5]ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ ಗ್ರಾಮೀಣ ಬಿಪಿಓ ಯೋಜನೆಯಡಿಯಲ್ಲಿ 2009–10ನೇ ಸಾಲಿನಲ್ಲಿ ನಾಲ್ಕು ಅರ್ಹ ಅಭ್ಯರ್ಥಿಗಳ ಪ್ರಸ್ತಾವನೆಗೆ ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ:

ಮೇಲೆ [6]ರಲ್ಲಿ ಓದಲಾದ ನಿರ್ದೇಶಕರು ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಪತ್ರದಲ್ಲಿ ಸರ್ಕಾರದ ಮಾರ್ಗಸೂಚಿಯನ್ವಯ ಕೆಬಿಟ್ಸ್ ಸಂಸ್ಥೆಯವರು ಅರ್ಜಿಗಳನ್ನು ಆಹ್ವಾನಿಸಿದ್ದು, ನಿಗದಿಪಡಿಸಿದ ಕೊನೆಯ ದಿನಾಂಕ 7–8–2009ರೊಳಗೆ 124 ಅರ್ಜಿಗಳನ್ನು ಸ್ವೀಕರಿಸಲಾಗಿದ್ದು, ಸದರಿ ಅರ್ಜಿಗಳನ್ನು ಸರ್ಕಾರಿ ಆದೇಶ ದಿನಾಂಕ:4.2.2009ರಲ್ಲಿ ರಚಿಸಲಾದ ಸ್ಕ್ರೀನಿಂಗ್ ಕಮಿಟಿಯು ಸರ್ಕಾರದ ಮಾರ್ಗಸೂಚಿಯನ್ವಯ ಅರ್ಜಿಗಳನ್ನು ಪರಿಶೀಲಿಸಿ ಅರ್ಹರಾದ 20 ಅರ್ಜಿದಾರರನ್ನು ವೈಯಕ್ತಿಕ ಸಂದರ್ಶನ ನಡೆಸಿ, ಈ ಕೆಳಕಂಡ ಎಂಟು ಅರ್ಹ ಅಭ್ಯರ್ಥಿಗಳ ಅರ್ಜಿಗಳನ್ನು ಶಿಫಾರಸ್ಸು ಮಾಡಿ ಸರ್ಕಾರದಿಂದ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

| ಕ್ರ.ಸಂ. | ಆಯ್ಕೆಯಾದ ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಬಿಪಿಓ ಕೇಂದ್ರ ತೆರೆಯಲು ಉದ್ದೇಶಿಸಿರುವ ಸ್ಥಳ |
|---|---|---|
| 1 | ಜಿ.ವಿ. ಭಟ್, ಡೈನಾಮಿಕ್ ಇನ್ಫೊ ಸರ್ವಿಸ್ ಇಂಡಿಯಾ ಪ್ರೈವೇಟ್ ಲಿಮಿಟೆಡ್ | ಶಿರಸಿ ಉತ್ತರ ಕನ್ನಡ ಜಿಲ್ಲೆ |
| 2 | ಗುರುರಾಜ್ ವೈ.ಎಸ್, ಮುರುಘೇಂದ್ರ ಪ್ಯಾರಾಡೈಸ್, | ಹುಳಿಯಾರ್, ತುಮಕೂರು ಜಿಲ್ಲೆ |
| 3 | ನರೇಂದ್ರ ಎಚ್.ಎನ್. | ಚಿಕ್ಕಬಳ್ಳಾಪುರ |
| 4 | ರವಿ ಕೆ.ಎಸ್. | ಪಾವಗಡ, ತುಮಕೂರು ಜಿಲ್ಲೆ |
| 5 | ಸಚ್ಚಿದಾನಂದ ಪಿ. ಕಿಣಿ,<br>ಯುನಿಸಾಫ್ಟ್ ಇನ್ಫೊಟೆಕ್ ಪ್ರೈ. ಲಿಮಿಟೆಡ್ | ಹೊಸದುರ್ಗ, ಚಿತ್ರದುರ್ಗ ಜಿಲ್ಲೆ |
| 6 | ಉಮೇಶ್ ಎ ನಾಗರಹಳ್ಳಿ & ಶಿವಕುಮಾರ್ ಗೌಡ ಎಸ್ ಪಾಟೀಲ್, | ಮುಂಡರಗಿ ಗದಗ ಜಿಲ್ಲೆ |
| 7 | ಮುರಳಿಧರ್ ಭಟ್ ಪಿ, ಮೈಸೂರು ಇನ್ಫೊಟೆಕ್ | ನಂಜನಗೂಡು, ಮೈಸೂರು ಜಿಲ್ಲೆ |
| 8 | ವಿಜಯ್ ಪ್ರಕಾಶ್ & ವಿಠಲ್ ಜಿ ಹೈಯಾಳ್, | ದೇವದುರ್ಗ, ರಾಯಚೂರು ಜಿಲ್ಲೆ |

ಸ್ಕ್ರೀನಿಂಗ್ ಕಮಿಟಿಯ ಶಿಫಾರಸ್ಸಿನಂತೆ ಗ್ರಾಮೀಣ ಬಿಪಿಓ ಕೇಂದ್ರಗಳನ್ನು ಸ್ಥಾಪಿಸುವ ಬಗ್ಗೆ ಮೇಲಿನ ಎಂಟು ಅಭ್ಯರ್ಥಿಗಳ ಪ್ರಸ್ತಾವನೆಗಳನ್ನು ಅನುಮೋದಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 39 ಎಂಡಿಎ 2008, ಬೆಂಗಳೂರು, ದಿನಾಂಕ:26ನೇ ಸೆಪ್ಟೆಂಬರ್, 2009**

ಪ್ರಸ್ತಾವನೆಯಲ್ಲಿ ಹೇಳಿರುವ ಸಂದರ್ಭದಲ್ಲಿ ಗ್ರಾಮೀಣ ಬಿಪಿಓ ಯೋಜನೆಯಡಿಯಲ್ಲಿ 2009–10ನೇ ಸಾಲಿನಲ್ಲಿ ಅನುಬಂಧ 'ಅ' ರಲ್ಲಿ ವಿವರಿಸಿರುವ ಎಂಟು ಅರ್ಹ ಅಭ್ಯರ್ಥಿಗಳ ಪ್ರಸ್ತಾವನೆಗೆ ಈ ಕೆಳಕಂಡ ನಿಬಂಧನೆ ಮೇರೆಗೆ ಸರ್ಕಾರದ ಅನುಮೋದನೆ ನೀಡಲಾಗಿದೆ.

1. ಕೆಬಿಟ್ಸ್ ಸಂಸ್ಥೆಯವರು ಮೇಲೆ [1] ಮತ್ತು [2] ರಲ್ಲಿ ಓದಲಾದ ಸರ್ಕಾರದ ಆದೇಶಗಳನ್ವಯ ಹಾಗೂ ಮಾರ್ಗಸೂಚಿಯಂತೆ ಗ್ರಾಮೀಣ ಬಿಪಿಓ ಕೇಂದ್ರಗಳಿಗೆ ಪ್ರಗತಿಗೆ ಅನುಗುಣವಾಗಿ ಕಾಲಕಾಲಕ್ಕೆ ಹಂತಹಂತವಾಗಿ ಹಣ ಬಿಡುಗಡೆ ಮಾಡತಕ್ಕದ್ದು.
2. ಗ್ರಾಮೀಣ ಬಿಪಿಓ ಕಾರ್ಯವೈಖರಿಯನ್ನು ಆಗಿಂದಾಗ್ಗೆ ತಪಾಸಣೆ ಮಾಡಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.
3. ಬಿಪಿಓ ಕೇಂದ್ರಗಳಿಂದ ವಿನಿಯೋಗಿತ ಪತ್ರಗಳನ್ನು ಪಡೆದು ಸರ್ಕಾರಕ್ಕೆ ಸಕಾಲದಲ್ಲಿ ಸಲ್ಲಿಸತಕ್ಕದ್ದು.
4. ಗ್ರಾಮೀಣ ಬಿಪಿಓ ಕೇಂದ್ರಗಳಿಗೆ ಬಿಡುಗಡೆ ಮಾಡುವ ಹಣ ದುರುಪಯೋಗವಾಗದಂತೆ ಹಾಗೂ ಯೋಜನೆಯ ಅನುಷ್ಠಾನವನ್ನು ಮಧ್ಯದಲ್ಲಿ ರದ್ದುಪಡಿಸಿದರೆ ಸರ್ಕಾರದಿಂದ ನೀಡಲಾದ ಆರ್ಥಿಕ ಸೌಲಭ್ಯವನ್ನು ವಸೂಲಿ ಮಾಡುವ ಬಗ್ಗೆ/ಮೂಲಭೂತ ಸೌಕರ್ಯವನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಕರಾರಿನಲ್ಲಿ ಸೂಕ್ತ ನಿಬಂಧನೆಗಳನ್ನು ವಿಧಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ವಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 39 ಎಂಡಿಎ 2008, ಬೆಂಗಳೂರು, ದಿನಾಂಕ:26ನೇ ಸೆಪ್ಟೆಂಬರ್, 2009**

| ಕ್ರ.ಸಂ. | ಆಯ್ಕೆಯಾದ ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ ಶ್ರೀ/ಶ್ರೀಮತಿ | ಬಿಪಿಓ ಕೇಂದ್ರ ತೆರೆಯಲು ಉದ್ದೇಶಿಸಿರುವ ಸ್ಥಳ |
|---|---|---|
| 1 | ಜಿ.ವಿ. ಭಟ್,<br>ಡೈನಾಮಿಕ್ ಇನ್ಫೊ ಸರ್ವಿಸ್ ಇಂಡಿಯಾ ಪ್ರೈವೇಟ್ ಲಿಮಿಟೆಡ್, ನಂ 346/3, ವಿಶ್ವಲಕ್ಷ್ಮೀ ನಿಲಯ, ವೀರಭದ್ರ ರಸ್ತೆ, ಶಿರಸಿ ಉತ್ತರ ಕನ್ನಡ ಜಿಲ್ಲೆ | ಶಿರಸಿ ಉತ್ತರ ಕನ್ನಡ ಜಿಲ್ಲೆ |
| 2 | ಗುರುರಾಜ್ ವೈ.ಎಸ್,<br>ನಂ. 37, 4ನೇ ಕ್ರಾಸ್, 24ನೇ ಮೇನ್, ಮುರುಘೇಂದ್ರ ಪ್ಯಾರಾಡೈಸ್, ಮಂಜುನಾಥ ಕಾಲೋನಿ, ಜೆ.ಪಿ. ನಗರ, 2ನೇ ಫೇಸ್, ಬೆಂಗಳೂರು–68 | ಹುಳಿಯಾರ್, ತುಮಕೂರು ಜಿಲ್ಲೆ |
| 3 | ನರೇಂದ್ರ ಎಚ್.ಎನ್.<br>ನಂ. 80, 8ನೇ ಮೇನ್, ಅವಲಹಳ್ಳಿ ಎಕ್ಸ್ ಟೆನ್ಸನ್, ಬನಶಂಕರಿ 3ನೇ ಹಂತ, ಬೆಂಗಳೂರು–85 | ಚಿಕ್ಕಬಳ್ಳಾಪುರ |
| 4 | ರವಿ ಕೆ.ಎಸ್.<br>ನಂ.1534/ಬಿ, ರಾಗಿಗುಡ್ಡ, ಕಲ್ಯಾಣ ಮಂಟಪ ರೋಡ್, ಜೆ.ಪಿ. ನಗರ, 3ನೇ ಹಂತ, ಬೆಂಗಳೂರು | ಪಾವಗಡ, ತುಮಕೂರು ಜಿಲ್ಲೆ |
| 5 | ಸಚ್ಚಿದಾನಂದ ಪಿ. ಕಿಣಿ,<br>ಯುನಿಸಾಫ್ಟ್ ಇನ್ಫೊಟೆಕ್ ಪ್ರೈ. ಲಿಮಿಟೆಡ್,<br>ನಂ. 701, ನಾರ್ಥ್ ಬ್ಲಾಕ್, ಫ್ರಂಟ್‌ವ್ವಿಂಗ್, 7ನೇ ಮಹಡಿ, 47, ಮಣಿಪಾಲ್ ಸೆಂಟರ್, ಡಿಕೆನ್ ಸನ್ ರೋಡ್, ಬೆಂಗಳೂರು–42. | ಹೊಸದುರ್ಗ, ಚಿತ್ರದುರ್ಗ ಜಿಲ್ಲೆ |
| 6 | ಉಮೇಶ್ ಎ ನಾಗರಹಳ್ಳಿ & ಶಿವಕುಮಾರ್ ಗೌಡ ಎಸ್ ಪಾಟೀಲ್,<br>ಅಂಬಾಭವಾನಿ ನಗರ, ಹೊಸ ಬಸ್ ಸ್ಟ್ಯಾಂಡ್ ಹತ್ತಿರ, ಮುಂಡರಗಿ, ಗದಗ ಜಿಲ್ಲೆ | ಮುಂಡರಗಿ ಗದಗ ಜಿಲ್ಲೆ |
| 7 | ಮುರಳಿಧರ್ ಭಟ್ ಪಿ,<br>ಮೈಸೂರು ಇನ್ಫೊಟೆಕ್<br>ನಂ. 41, 1ನೇ ಮಹಡಿ, ಭಾನ್ಹವಿ ಕಾಂಪ್ಲೆಕ್ಸ್, ಡಬಲ್ ರೋಡ್, ಎಸ್ ಬಿಎಂ ಹತ್ತಿರ, ಕುವೆಂಪು ನಗರ, ಮೈಸೂರು–09 | ನಂಜನಗೂಡು, ಮೈಸೂರು ಜಿಲ್ಲೆ |
| 8 | ವಿಜಯ್ ಪ್ರಕಾಶ್ & ವಿಠಲ್ ಜಿ ಹೈಯಾಳ್,<br>ಗಾಂಧಿ ಚೌಕ್ ಮೈನ್ ರೋಡ್, ದೇವದುರ್ಗ, ರಾಯಚೂರು ಜಿಲ್ಲೆ | ದೇವದುರ್ಗ, ರಾಯಚೂರು ಜಿಲ್ಲೆ |

**ಎಂ.ವಿ. ಕೃಷ್ಣಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

ಪಿ.ಆರ್. 2267

## INFRASTRUCTURE DEVELOPMENT SECRETARIAT

**Sub :** Servicing of HUDCO Loan availed for procurement of land for Bangalore International Airport Project.

**Read :**
1. G.O.No. IDD 47 DIA 2006 dated:29.6.2007.
2. G.O.No. IDD 47 DIA 2006 (P) dated:24.9.2007
3. G.O.No. IDD 47 DIA 2006 (P) dated:25.9.2007
4 G.O.No. IDD 47 DIA 2006 (P) dated:3.12.2007
5. G.O.No. IDD 47 DIA 2006 dated:25.3.2008
6. G.O.No. IDD 47 DIA 2006 dated:23.6.2008
7. G.O.No. IDD 47 DIA 2007dated:16.9.2008

8. G.O.No. IDD 47 DIA 2007 dated:15.12.2008
9. G.O.No. IDD 47 DIA 2006 dated:13.3.2009
10. G.O.No. IDD 47 DIA 2006 dated:12.8.2009
11. Letter No. DGM (IPD)/1543/dated 14.9.2009 of the Dy. G.M.(IPD), KSIIDC

**Preamble:**

In the G.O's read at Sl.No. (1) to (10) above, periodical release of funds have been made to KSIIDC for servicing HUDCO loan for the quarters ending June 2007, September 2007, December 2007, March 2008, June 2008, September 2008, December 2008, March 2009 and June 2009.

2. in the letter dated 14.9.2009 read at S.No. (11) above, the DGM "(IPD), KSIIDC has requested for release of an amount of Rs,.423 05 lakhs (Principal Rs .272.58 lakhs+ interest Rs 141.87 lakhs+ Service Charges Rs. 8.60 lakhs) towards servicing of HUDCO loan for the quarter ending September 2009.

3. Government have examined the proposal and decided to release the above mentioned amount. Hence the following order.

**Government Order No.IDD 47 DIA 2006, Bangalore, Dated:26th September, 2009**

After careful examination of the proposal sanction of the Government is hereby accorded for release of Rs. 414.45 lakhs (Rupees Four crore fourteen lakhs forty Five thousand only i.e., Principal Rs .272.58 lakhs +Interest Rs. 141.87 lakhs) to KSIIDC being the installment for the quarter ending September 2009 to service the HUDCO Loan availed by KSIIDC for the Bangalore International Airport Project.

2) This expenditure shall be met from the Head of Account "5465-01-190-1-04(P)-BIAP Assistance for repayment of HUDCO loan-240 Debt Servicing" out of the budget provision of Rs .2599.00 lakhs in 2009-10.

3) The Managing Director, KSIIDC is authorized to draw the amount on a payees receipt duly countersigned by the Under Secretary to Government, Infrastructure Development Department.

4) This order is issued in accordance with delegation of Financial Powers to Principal Secretaries/Secretaries to Govt., vide G.O. No. FD 1 TFP 2008 dated 16.5.2008.

By order and in the name of the Governor of Karnataka

P.R. 2268

**N. MANJULA GEETHA**

Under Secretary to Govt.

Infrastructure Development Department

**HORTICULTURE SECRETARIAT**

**Sub :** "Centrally Sponsored Scheme on Micro Irrigation"-Implementation during 2009-10-reg.

**Read :** 1. G.O.No. AIID 81 HPP 2009 dated:11.9.2009.

2. Director of Horticulture letter No. ತೋಇ/ತೋಜಂನಿಹನೀ/ಸತೋಅ–1/132/2008–09 dated.:15.9.2009

**Preamble:**

In the Government Order read at (I)above administrative approval has been accorded for the Implementation of the "Drip Irrigation-special subsidy for horticulture crops" Head of Account 2401-00-108-2-30 as a district sector scheme during the year 2009-10 on Mission Mode.

2. The Director of Horticulture in his letter read at (2) above has requested to release the State share of Rs. 981.61 lakhs towards matching State share for the funds released from Government of India during 2008-09.

3. An amount of Rs .1000.00 lakhs been earmarked in the budget during 2009-10 under the "Centrally Sponsored Scheme on Micro Irrigation" Head of Account 2401-00-108-2-30-059 in the State sector .The request of the Director of Horticulture has been examined and hence this order.

**Government Order No. AHD 82 HPP 2009, Bangalore, Dated:26th September, 2009**

Government is pleased to release to the Director of Horticulture an amount of Rs .981.61 lakhs (Rupees Nine Hundred and Eighty One Lakhs and Sixty One Thousand Only) towards the State share for "Centrally Sponsored Scheme on Micro Irrigation" under the Head of Acccount 2401-00-108-2-30-059 in the State sector during the year 2009-10.

2. This order issue with the concurrence of Finance Department vide its Note No. FD 385 Exp-4 2009 dated:9.9.2009 and Internal Financial Advisor, Agriculture, Horticulture and Animal Husbandry vide its Note No. ಕೃತೋಇ 248 ಆಂಅಸ 2009 dated:25.9.2009.

By order and in the name of Governor of Karnataka

P.R. 2269

**S. RAJU**
Under Secretary to Govt.
Horticulture Department

**ಜಲಸಂಪನ್ಮೂಲ ಸಚಿವಾಲಯ**

**ವಿಷಯ :** ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕು ಬೆಣಕಲ್ಲು ಗ್ರಾಮದ ಹತ್ತಿರ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಭೂಸ್ವಾಧೀನ ಪ್ರಕ್ರಿಯೆ ನಡೆಸಲು ಭೂಸ್ವಾಧೀನಾಧಿಗಳಲ್ಲಿ ಮುಂಗಡ ಹಣ ಠೇವಣಿ ಮಾಡುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ :3.8.09 ರ ಪತ್ರ ಸಂ :ಸನೀ (ಉ) ವ/ಬಿಜಾ/ಭೂಸ್ವಾಪ್ರ/2009–10/4575.

**ಪ್ರಸ್ತಾವನೆ:**

ಮೇಲೆ ಓದಲಾದ ದಿನಾಂಕ:3.8.09ರ ಪತ್ರದಲ್ಲಿ ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕು, ಬೆಣಕಲ್ಲು ಗ್ರಾಮದ ಹತ್ತಿರ ಕೆರೆ ನಿರ್ಮಾಣಕ್ಕಾಗಿ ಬೆಣಕಲ್ ಗ್ರಾಮದ ಸರ್ವೆ ನಂಬರ್‌ಗಳಿಗೆ ಸೇರಿದ ಒಟ್ಟು 6–25 ಎಕರೆ ಜಮೀನಿನ ಸ್ವಾಧೀನಕ್ಕಾಗಿ ಭೂಸ್ವಾಧೀನ ಪ್ರಕ್ರಿಯೆ ನಡೆಸಲು ಭೂಸ್ವಾಧೀನಾಧಿಕಾರಿಗಳಲ್ಲಿ ಮುಂಗಡ ಹಣವಾಗಿ ಠೇವಣಿ ಮಾಡಲು ಬಿಡುಗಡೆ ಮಾಡುವಂತೆ ಕೋರಿದ್ದಾರೆ.

ಸರ್ಕಾರದ ಸುತ್ತೋಲೆ ಸಂಖ್ಯೆ:ಕಂಇ 42 ಭೂಸ್ವಾಹಾ 2000, ದಿನಾಂಕ:8.10.2001ರಲ್ಲಿ ಭೂಸ್ವಾಧೀನ ಪ್ರಕ್ರಿಯೆ ನಡೆಸಲು ಸಂಭವನೀಯ ಪರಿಹಾರ ಮೊತ್ತದ ಶೇ. 50ರಷ್ಟನ್ನು ಭೂಸ್ವಾಧೀನಾಧಿಕಾರಿಗಳಲ್ಲಿ ಮುಂಗಡ ಹಣವಾಗಿ ಠೇವಣಿ ಮಾಡುವಂತೆ ಸೂಚಿಸಲಾಗಿದೆ. ಅದರಂತೆ ಮೇಲ್ಕಂಡ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

ವಿಷಯವನ್ನು ಪರಿಶೀಲಿಸಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 135 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ:1ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಬಳ್ಳಾರಿ ಜಿಲ್ಲೆ, ಹಗರಿಬೊಮ್ಮನಹಳ್ಳಿ ತಾಲ್ಲೂಕಿನ ಬೆಣಕಲ್ಲು ಗ್ರಾಮದ ಹತ್ತಿರ ಕೆರೆ ನಿರ್ಮಾಣಕ್ಕೆ ಅಗತ್ಯವಿರುವ ಬೆಣಕಲ್ ಗ್ರಾಮದ ಸರ್ವೆ ನಂಬರ್ ಗಳಿಗೆ ಸೇರಿದ ಒಟ್ಟು 6–25 ಎಕರೆ ಜಮೀನಿನ ಭೂಸ್ವಾಧೀನ ಪ್ರಕ್ರಿಯೆ ನಡೆಸಲು ಸಂಭವನೀಯ ಭೂಸ್ವಾಧೀನ ವೆಚ್ಚದ ಶೇ. 50ರಷ್ಟು ಅಂದರೆ ರೂ., 1,21,779–00ಗಳನ್ನು (ಒಂದು ಲಕ್ಷದ ಇಪ್ಪತ್ತೊಂದು ಸಾವಿರದ ಏಳುನೂರ ಎಪ್ಪತ್ತೊಂಭತ್ತು ರೂ.ಗಳು ಮಾತ್ರ) ಭೂಸ್ವಾಧೀನಾಧಿಕಾರಿಗಳಲ್ಲಿ ಮುಂಗಡ ಹಣವಾಗಿ ಠೇವಣಿ ಮಾಡಲು ಸರ್ಕಾರವು ಅನುಮೋದನೆ ನೀಡಿದೆ.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00 ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್ ಡಿ 1 ಟಿಎಫ್‌ಪಿ 2008 ದಿನಾಂಕ:16.5.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2303

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ವಿಷಯ :** ಬೀದರ್ ಜಿಲ್ಲೆ, ಭಾಲ್ಕಿ ತಾಲ್ಲೂಕು ಕಳಸದಾಳ–1 ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ :21.2.09ರ ಪತ್ರ ಸಂ :ಮುಇಂ/ಸನೀ (ಉ)ವ/ಬಿಜಾ/ಭೂಸ್ವಾಪ್ರ/2008–09/1201.

**ಪ್ರಸ್ತಾವನೆ:**

ಮೇಲೆ ಓದಲಾದ ಬಿಜಾಪುರ ಸಣ್ಣ ನೀರಾವರಿ ಉತ್ತರ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಬೀದರ್ ಜಿಲ್ಲೆ, ಭಾಲ್ಕಿ ತಾಲ್ಲೂಕು ಕಳಸದಾಳ–1 ಸಣ್ಣ ನೀರಾವರಿ ಕೆರೆ ಕಾಲುವೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ದೋಣಗಾಪೂರ ಗ್ರಾಮದ ಜಮೀನುಗಳಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣಗಳಲ್ಲಿ ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು ರೂ. 26,02,699–00ಗಳ ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

– ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ:18.8.1994

– ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ :9.11.1998

ಭೂಸ್ವಾಧೀನಕ್ಕೊಳಪಟ್ಟ ಡೋಣಗಾಪುರ ಗ್ರಾಮದ ಸ.ನಂ. 238/ಎಎರ 3–10 ಎಕರೆ ಹಾಗೂ ಸ.ನಂ. 237ರ 4.20 ಎಕರೆ ಜಮೀನಿನ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಬೀದರ್‌ನ ಹೆಚ್ಚುವರಿ ಸಿವಿಲ್ (ಹಿರಿಯ ಶ್ರೇಣಿ) ನ್ಯಾಯಾಲಯದಲ್ಲಿ ಎಲ್.ಎ.ಸಿ. ಪ್ರಕರಣ ಸಂಖ್ಯೆ :16/02 ಹಾಗೂ 18/02ನ್ನು ದಾಖಲಿಸಿದ್ದು, ಈ ಪ್ರಕರಣಗಳಲ್ಲಿ ಸಿವಿಲ್ ನ್ಯಾಯಾಲಯವು ಪರಿಹಾರ ಧನ ಹೆಚ್ಚಿಸಿ ಇತರೆ ಶಾಸನಬದ್ಧ ಸವಲತ್ತುಗಳೊಂದಿಗೆ ಪಾವತಿಸಲು ತೀರ್ಪು ನೀಡಿದೆ. ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸುವ ಅಗತ್ಯವಿಲ್ಲವೆಂದು ಕಂದಾಯ ಇಲಾಖೆಯು ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ :

| ಕ್ರ.ಸಂ | ಎಲ್ಎಸಿ ಸಂ | ದೋಣಗಾಪುರ ಗ್ರಾಮದ ಸ.ನಂ. | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 16/02 | 238/ಎಎ | 3–10 | 1091455 |
| 2 | 18/02 | 237 | 4–20 | 1511244 |
| | **ಒಟ್ಟು** | | | **2602699** |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ :ಸನೀಇ 41 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ :29ನೇ ಸೆಪ್ಟೆಂಬರ್, 2009**

ಬೀದರ್ ಜಿಲ್ಲೆ, ಭಾಲ್ಕಿ ತಾಲ್ಲೂಕು, ಕಳಸದಾಳ–1 ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ದೋಣಗಾಪುರ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ಗಳ ಜಮೀನಿಗೆ ಸಿವಿಲ್ ನ್ಯಾಯಾಲಯವು ಎಲ್.ಎ.ಸಿ. ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ. 26,02,699–00ಗಳನ್ನು (ಇಪ್ಪತ್ತಾರು ಲಕ್ಷದ ಎರಡು ಸಾವಿರದ ಆರುನೂರ ತೊಂಭತ್ತೊಂಭತ್ತು ರೂ.ಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳು ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ :16.5.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರ ದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2304

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಇಂಧನ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ:ಇಎನ್ 39 ಪಿಎಸ್‌ಆರ್ 2009, ಬೆಂಗಳೂರು, ದಿನಾಂಕ:3ನೇ ಅಕ್ಟೋಬರ್, 2009**

ಸರ್ಕಾರಿ ಆದೇಶ "ಸಂಖ್ಯೆ ಇಎನ್ 39 ಪಿಎಸ್‌ಆರ್ 2009 ದಿನಾಂಕ:31.8.2008" ಎಂದು ಇರುವುದನ್ನು ಸಂಖ್ಯೆ:ಇಎನ್ 39 ಪಿಎಸ್‌ಆರ್ 2009 ದಿನಾಂಕ:31.8.2009"ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2311

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## PERSONNEL AND ADMINISTRATIVE REFORMS SECRETARIAT

### ADDENDUM

**No. DPAR 169 KTP 2009, Bangalore, Dated: 1st October, 2009**

**Sub:** 12th Finance Commission Grants-Permission to draw amount in Advance-regarding

In the operative portion of the Government Order No.DPAR 169 KTP 2009, dated:7th September 2009 after sub-paragraph (b) the following words and sub-paragraph shall be added:

"c) The Director General, Administrative Training Institute, Mysore can draw the amount raising Payee's receipt which is to be countersigned by the Principal Secretary DPAR-AR''

By Order and in the name of the Governor of Karnataka,

**S.R. HIREMATH**

P.R. 2314

Under Secretary to Government,

Department of Personnel and Administrative Reforms (AR-Training)

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ :** ಶಿವಮೊಗ್ಗದಲ್ಲಿ ವಿಶೇಷ ಆರ್ಥಿಕ ವಲಯ ಮತ್ತು ವಿಶೇಷ ಆರ್ಥಿಕ ವಲಯ ರಹಿತ ಮಾಹಿತಿ ತಂತ್ರಜ್ಞಾನ ಉದ್ಯಾನವನ್ನು ಕಿಯೋನಿಕ್ಸ್ ಸಂಸ್ಥೆಯಿಂದ ಸ್ಥಾಪಿಸಲ್ಪಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆಐಟಿಡಿ 59 ಎಂಡಿಎ 2008, ಬೆಂಗಳೂರು ದಿನಾಂಕ :17.1.2009.
2. ವ್ಯವಸ್ಥಾಪಕ ನಿರ್ದೇಶಕರು, ಕಿಯೋನಿಕ್ಸ್ ರವರ ಪತ್ರ ಸಂಖ್ಯೆ KSEDC /IDC/ITP-SMG/08-09, ದಿ:21.8.2009

**ಪ್ರಸ್ತಾವನೆ:**

ಮಾನ್ಯ ಮುಖ್ಯಮಂತ್ರಿಯವರ 2008–09ನೇ ಸಾಲಿನ ಆರ್ಥಿಕ ವರ್ಷದ ಆಯವ್ಯಯ ಭಾಷಣದಲ್ಲಿನ ಘೋಷಣೆಯನ್ನು ಅನುಸರಿಸಿ ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮವು [ಕಿಯೋನಿಕ್ಸ್] 2 ಮತ್ತು 3ನೇ ದರ್ಜೆಯ ನಗರಗಳಲ್ಲಿ ಮಾಹಿತಿ ತಂತ್ರಜ್ಞಾನ ಉದ್ಯಾನಗಳ ಸ್ಥಾಪನೆ ಮತ್ತು ಅಭಿವೃದ್ಧಿಯನ್ನು ಕೈಗೆತ್ತಿಕೊಂಡಿದೆ.

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಭದ್ರಾವತಿ–ಶಿವಮೊಗ್ಗ ರಾಷ್ಟ್ರೀಯ ಹೆದ್ದಾರಿ 206 ಮಾಚೇನಹಳ್ಳಿಯ ಗ್ರಾಮ, ಶಿವಮೊಗ್ಗದಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಹಂಚಿಕೆ ಮಾಡಲ್ಪಟ್ಟ 33 ಎಕರೆ ಜಮೀನಿನ ಪೈಕಿ, 27.75 ಎಕರೆ ಜಮೀನಿನಲ್ಲಿ ರೂ. 1546.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಮಾಹಿತಿ ತಂತ್ರಜ್ಞಾನ ವಿಶೇಷ ಆರ್ಥಿಕ ವಲಯ ಐಟಿ ಪಾರ್ಕ್ ಮತ್ತು ವಿಶೇಷ ಆರ್ಥಿಕ ವಲಯ ರಹಿತ ಐಟಿ ಪಾರ್ಕ್‌ನ್ನು [ಬಹುಮಹಡಿ ಕಟ್ಟಡ ಸೇರಿದಂತೆ] ಖಾಸಗಿ ಪಾಲುದಾರರೊಂದಿಗೆ ಸ್ಥಾಪಿಸಲು ಕಿಯೋನಿಕ್ಸ್ ಸಂಸ್ಥೆಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿತ್ತು ಹಾಗೂ ಬಹುಮಹಡಿ ವಿಶೇಷ ಆರ್ಥಿಕ ವಲಯ ರಹಿತ ಮಾಹಿತಿ ತಂತ್ರಜ್ಞಾನ ಪಾರ್ಕ್‌ನ್ನು ಅಭಿವೃದ್ಧಿಪಡಿಸಲು ಕಿಯೋನಿಕ್ಸ್ ಸಂಸ್ಥೆಯವರು ಖಾಸಗಿ ಪಾಲುದಾರರನ್ನು ಕಾನೂನಿನ ಪ್ರಕಾರ ಪ್ರಕ್ರಿಯೆಯನ್ನು ಅನುಸರಿಸಿ ಮತ್ತು ಸರ್ಕಾರದ ಪೂರ್ವಾನುಮತಿಯೊಂದಿಗೆ ಆಯ್ಕೆ ಮಾಡಲು ಅನುಮತಿ ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಕಿಯೋನಿಕ್ಸ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ ಕಿಯೋನಿಕ್ಸ್ ಸಂಸ್ಥೆಯು ಮಾಹಿತಿ ತಂತ್ರಜ್ಞಾನ ವಿಶೇಷ ಆರ್ಥಿಕ ವಲಯವನ್ನು ವಿಶೇಷ ಆರ್ಥಿಕ ವಲಯ ನಿಯಮಗಳಂತೆ ಸಹ ಅಭಿವೃದ್ಧಿದಾರರಾಗಿ ಖಾಸಗಿ ಪಾಲುದಾರರೊಂದಿಗೆ ಅಭಿವೃದ್ಧಿ ಪಡಿಸುತ್ತಲಿದ್ದು, ಕಿಯೋನಿಕ್ಸ್ ಸಂಸ್ಥೆಯು ಮಾಹಿತಿ ತಂತ್ರಜ್ಞಾನ ಉದ್ಯಾನದ ವಿಶೇಷ ಆರ್ಥಿಕ ವಲಯರಹಿತ ಘಟಕಕ್ಕೆ ಸಂಬಂಧಿಸಿದಂತೆ ಮಾಹಿತಿ ತಂತ್ರಜ್ಞಾನ ಉದ್ಯಾನದ ಅಭಿವೃದ್ಧಿಗೆ ಖಾಸಗಿ ಪಾಲುದಾರರು ಮುಂದೆ ಬರುತ್ತಿಲ್ಲವೆಂದು ಹೇಳಿದೆ. ಶಿವಮೊಗ್ಗದಲ್ಲಿನ ಮಾಹಿತಿ ತಂತ್ರಜ್ಞಾನ ಉದ್ಯಾನದ ವಿಶೇಷ ಆರ್ಥಿಕ ವಲಯರಹಿತ ಭಾಗದಲ್ಲಿ ಖಾಸಗಿ ಅಭಿವೃದ್ಧಿದಾರರು ಹೂಡಿಕೆಯಲ್ಲಿ ಆಸಕ್ತಿ ತೋರದೆ ಇರುವುದರಿಂದ, ಕಿಯೋನಿಕ್ಸ್ ಸಂಸ್ಥೆಯು ದಿನಾಂಕ:19.8.09 ರಂದು ನಡೆದ ಮಂಡಳಿಯ ಸಭೆಯಲ್ಲಿ ಮಾಹಿತಿ ತಂತ್ರಜ್ಞಾನ ಉದ್ಯಾನದ ವಿಶೇಷ ಆರ್ಥಿಕ ವಲಯರಹಿತ ಭಾಗವನ್ನು ಕಿಯೋನಿಕ್ಸ್ ಸಂಸ್ಥೆಯೇ ನೇರವಾಗಿ ತನ್ನ ಸ್ವಂತ ಹಣದಿಂದಲೇ ಅಭಿವೃದ್ಧಿಪಡಿಸಲು ನಿರ್ಣಯಿಸಿದೆಯಾದ್ದರಿಂದ ಕಿಯೋನಿಕ್ಸ್ ಸಂಸ್ಥೆಯು ಶಿವಮೊಗ್ಗದಲ್ಲಿನ ಮಾಹಿತಿ ತಂತ್ರಜ್ಞಾನ ಉದ್ಯಾನದ ವಿಶೇಷ ಆರ್ಥಿಕ ವಲಯರಹಿತ ಘಟಕವನ್ನು ಖಾಸಗಿ ಪಾಲುದಾರರನ್ನು ತೆಗೆದುಕೊಳ್ಳದೇ ತಾನೇ ಸ್ವಂತವಾಗಿ ಅಭಿವೃದ್ಧಿಪಡಿಸಲು ಸರ್ಕಾರದ ಅನುಮೋದನೆಯನ್ನು ಕೋರಿದೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಸರ್ಕಾರವು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶವನ್ನು ಮಾರ್ಪಡಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 59 ಎಂಡಿಎ 2008, ಬೆಂಗಳೂರು, ದಿನಾಂಕ:5ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ಹೇಳಿರುವ ಸಂದರ್ಭಗಳಲ್ಲಿ ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶವನ್ನು ಮಾರ್ಪಡಿಸಿ ಈ ಕೆಳಕಂಡಂತೆ ಕಿಯೋನಿಕ್ಸ್ ಸಂಸ್ಥೆ ವತಿಯಿಂದ ಶಿವಮೊಗ್ಗದಲ್ಲಿ ಮಾಹಿತಿ ತಂತ್ರಜ್ಞಾನ ಪಾರ್ಕ್ ಸ್ಥಾಪಿಸಲು ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

1. ಮಾಚೇನಹಳ್ಳಿಯ ಗ್ರಾಮ ಶಿವಮೊಗ್ಗದಲ್ಲಿ ಭದ್ರಾವತಿ–ಶಿವಮೊಗ್ಗ ರಾಷ್ಟ್ರೀಯ ಹೆದ್ದಾರಿ 206ರ ಪಕ್ಕದಲ್ಲಿನ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಪಡೆಯಲಾಗಿರುವ 33 ಎಕರೆ ಜಮೀನಿನಲ್ಲಿ ರೂ. 1546.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ವಿಶೇಷ ಆರ್ಥಿಕ ವಲಯ ಐಟಿ ಪಾರ್ಕ ಮತ್ತು ವಿಶೇಷ ಆರ್ಥಿಕ ವಲಯರಹಿತ ಐಟಿ ಪಾರ್ಕ್‌ನ್ನು [ಬಹುಮಹಡಿ ಕಟ್ಟಡ ಸೇರಿದಂತೆ] ಸ್ಥಾಪಿಸಲು;
2. ಯೋಜನೆಯ ವಿಶೇಷ ಆರ್ಥಿಕ ವಲಯ ಭಾಗವನ್ನು ವಿಶೇಷ ಆರ್ಥಿಕ ವಲಯ ಕಾಯ್ದೆ/ನಿಯಮಗಳ ಪ್ರಕಾರ ಸಹ ಅಭಿವೃದ್ಧಿದಾರರೊಂದಿಗೆ ಅಭಿವೃದ್ಧಿಪಡಿಸಲು;
3. ಯೋಜನೆಯ ವಿಶೇಷ ಆರ್ಥಿಕ ವಲಯರಹಿತ ಭಾಗವನ್ನು ಖಾಸಗಿ ಪಾಲುದಾರರಿಲ್ಲದೆ ತನ್ನ ಸ್ವಂತ ಹಣದಿಂದಲೇ ಅಭಿವೃದ್ಧಿಪಡಿಸಲು;
2. ರಾಜ್ಯ ಸರ್ಕಾರವು ಕಿಯೋನಿಕ್ಸ್ ಸಂಸ್ಥೆಗೆ 2008–09ನೇ ಆರ್ಥಿಕ ವರ್ಷದಲ್ಲಿ ರೂ. 5 ಕೋಟಿಗಳ ಇಕ್ವಿಟಿ ಅನುದಾನವನ್ನು ನೀಡಲಾಗಿದೆ. ಕಿಯೋನಿಕ್ಸ್ ಸಂಸ್ಥೆಯು ಯೋಜನೆಯ ವೆಚ್ಚವನ್ನು ಭರಿಸಲು ಇಕ್ವಿಟಿ ಅನುದಾನವನ್ನು ವಿನಿಯೋಗಿಸಬಹುದು ಹಾಗೂ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳಿಂದ ಹಣವನ್ನು ಪಡೆಯಬಹುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2315

**ಎಂ.ವಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ

ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## HORTICULTURE SECRETARIAT

**Sub :** Release of State share for National Horticulture Mission (NHM) programme.

**Read :** 1. Government of India letter F.No. 33-42/2009-Hort dated 4.8.2009

2. Letter of Director of Horticulture No.. ಕೆಎಸ್‌ಹೆಚ್‌ಡಿಎ/ಇಡಿ/ಎನ್1/30/2009–10. dated.:11.8.2009

**Preamble:**

Government of India has conveyed the administrative approval for implementation of the Centrally Sponsored Scheme on National Horticulture Mission programme during 2009-10 vide letter read at (1) above.

2. An amount of Rs. 2500.00 lakhs has been earmarked in the budget during 2009-10 under the State sector Scheme namely, "State share for National Horticulture Mission", Head of ACCOUNT 2401-00-800-2-30-059(plan).

3. The Director of Horticulture in his letter read at (2) above has requested the Government to release an amount of Rs.1212.00 lakhs towards the balance of State share for the year 2008-09.

4. The issue was examined and hence the following order.

**Government Order No. AHD 65 HPP 2009, Bangalore, Dated: 1st October, 2009**

Government is pleased to release to the Director of Horticulture an amount of Rs .1000.00 lakhs (Rupees One thousand Lakhs Only) under the Head of Account 2401-00-800-2-30-059 (Plan )as State share for implementation of National Horticulture Mission programme during 2009-10.

2. This Order issues with the concurrence of Finance Department vide its Note No.ಆಇ 477 ವೆ4/09:dated:28.9.2009.

By order and in the name of Governor of Karnataka

P.R. 2320

**S. RAJU**

Under Secretary to Govt.

Horticulture Department

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಕಾರ್ಯಕಾರಿ ನಿರ್ದೇಶಕರಿಗೆ ವಾಹನವನ್ನು ಒದಗಿಸುವ ಬಗ್ಗೆ.

**ಓದಲಾಗಿದೆ :** 1. 29ನೇ ಮೇ 2009ರಲ್ಲಿ ನಡೆದ ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಬೋರ್ಡಿನ ಮೊದಲ ಸಭೆಯ ನಡೆವಳಿಗಳು.

**ಪ್ರಸ್ತಾವನೆ:**

ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ನ ಅಡಿಯಲ್ಲಿ, ಆರೋಗ್ಯ ವಿಮಾ ಯೋಜನೆಯನ್ನು ಕರ್ನಾಟಕದಲ್ಲಿ ಅನುಷ್ಠಾನಗೊಳಿಸಲು ಮೇಲೆ (1) ಓದಲಾದ ಸಭೆಯಲ್ಲಿ, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ನಡಿ ಸೃಜಿಸಲಾದ ಕಾರ್ಯಕಾರಿ ನಿರ್ದೇಶಕರ ಹುದ್ದೆಗೆ ಒಪ್ಪಿಗೆ ನೀಡಲಾಗಿತ್ತು.

ಆರೋಗ್ಯ ವಿಮೆಯನ್ನು ಜಿಲ್ಲೆಗಳಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಮತ್ತು ಬಲಪಡಿಸಲು ಜಿಲ್ಲೆಗಳಿಗೆ ಪ್ರವಾಸ ಕೈಗೊಳ್ಳಲು, ಕಾರ್ಯಕಾರಿ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ರವರಿಗೆ ಒಂದು ವಾಹನವು ಅತ್ಯಾವಶ್ಯಕವಾಗಿರುತ್ತದೆ. ಈ ಸಂಬಂಧ, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ನ ಅಧ್ಯಕ್ಷರಾಗಿರುವ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆರವರು, ವಾಹನವನ್ನು ಖರೀದಿಸಲು ಅನುಮೋದನೆಯನ್ನು ನೀಡಿದ್ದು, ಅದರಂತೆ ವಾಹನಗಳ ಮಾದರಿ ಮತ್ತು ದರಪಟ್ಟಿಗಳನ್ನು ಪರಿಶೀಲಿಸಿ, ಕಡಿಮೆ ದರಪಟ್ಟಿ ಹೊಂದಿರುವ Maruti Suzuki (SX4-ZXI BS-III) ಕಾರನ್ನು ಸ್ಥಳೀಯ ಖರೀದಿ ವಿಧಾನದಡಿ ಖರೀದಿಸುವ ಬಗ್ಗೆ.

ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಹೆಚ್‌ಎಫ್‌ಡಬ್ಲ್ಯೂ(ಪಿಆರ್) 122 ಡಬ್ಲ್ಯೂಬಿಎ 2009, ದಿನಾಂಕ:26ನೇ ಸೆಪ್ಟೆಂಬರ್, 2009**

ಮೇಲೆ ಪ್ರಸ್ತಾಪಿಸಿರುವ ಹಿನ್ನೆಲೆಯಲ್ಲಿ, ಸರ್ಕಾರವು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್‌ನ ವತಿಯಿಂದ ಆರೋಗ್ಯ ವಿಮೆಯನ್ನು ಜಿಲ್ಲೆಗಳಲ್ಲಿ ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಲುವಾಗಿ ಪ್ರವಾಸವನ್ನು ಕೈಗೊಳ್ಳಲು ಸರ್ಕಾರವು ಒಂದು Maruti Suzuki (SX4-ZXI BS-III) ಕಾರನ್ನು, ಸ್ಥಳೀಯ ಖರೀದಿ ವಿಧಾನದಡಿಯಲ್ಲಿ ಖರೀದಿಸಲು ಮಂಜೂರಾತಿ ನೀಡಿದೆ.

ಮೇಲಿನ ವೆಚ್ಚವನ್ನು ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ನ ಅನುದಾನದಡಿಯಲ್ಲಿ 2009–10ನೇ ಸಾಲಿನಲ್ಲಿ ಭರಿಸಬಹುದಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2321

**ಎಂ. ಶಶಿಧರ್**

ಸರ್ಕಾರದ ಉಪ ಕಾರ್ಯದರ್ಶಿ, ಕೆಹೆಚ್‌ಎಸ್‌ಡಿಆರ್‌ಪಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

**ವಿಷಯ :** ಮಾದರಿ ಕರ್ನಾಟಕ ಸಾರ್ವಜನಿಕ ಆರೋಗ್ಯ ಕಾಯ್ದೆಯ ಕರಡನ್ನು ಪರಿಶೀಲಿಸುವ ಮತ್ತು ಅಂತಿಮಗೊಳಿಸುವ ಕಾರ್ಯಕ್ಕೆ ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ :ಹೆಚ್‌ಎಫ್‌ಡಬ್ಲ್ಯೂ/ಕೆಎಸ್‌ಡಿಪಿ/ಎಸ್‌ಪಿಸಿ–36 ದಿನಾಂಕ :1.7.2004.
2. ದಿನಾಂಕ :27.5.2009ರ 14ನೇ ಯೋಜನಾ ಚಾಲನಾ ಸಮಿತಿಯ ನಡವಳಿಗಳು.
3. ವಿಶ್ವ ಬ್ಯಾಂಕಿನ ಇ–ಮೇಲ್ ದಿನಾಂಕ :13.7.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದನ್ವಯ ಕರ್ನಾಟಕ ರಾಜ್ಯದಲ್ಲಿ ಸಾರ್ವಜನಿಕ ಆರೋಗ್ಯ ಕಾಯ್ದೆಯನ್ನು ಜಾರಿಗೆ ತರುವ ಉದ್ದೇಶದಿಂದ ಒಂದು ಮಾದರಿ ಸಾರ್ವಜನಿಕ ಆರೋಗ್ಯ ಕಾಯ್ದೆಯ ಕರಡನ್ನು ತಯಾರಿಸುವ ಕಾರ್ಯವನ್ನು ನ್ಯಾಷನಲ್ ಲಾ ಸ್ಕೂಲ್ ಆಫ್ ಯೂನಿವರ್ಸಿಟಿ, ನಾಗರಬಾವಿ, ಬೆಂಗಳೂರವರಿಗೆ ವಹಿಸಲು ಮಂಜೂರಾತಿ ನೀಡಲಾಗಿತ್ತು.

ತದನಂತರ ಮೇಲೆ (2)ರಲ್ಲಿ ಓದಲಾದ ದಿನಾಂಕ:17.5.2009ರಲ್ಲಿ ನಡೆದ 14ನೇ ಯೋಜನಾ ಚಾಲನಾ ಸಮಿತಿಯ ಸಭೆಯಲ್ಲಿ ಈಗಾಗಲೇ ಸಾರ್ವಜನಿಕ ಆರೋಗ್ಯ ಕಾಯ್ದೆಯ ಬಗ್ಗೆ ತಯಾರಿಸಿರುವ ಕರಡನ್ನು ಪರಿಶೀಲಿಸುವ ಮತ್ತು ಅಂತಿಮಗೊಳಿಸುವ ಕಾರ್ಯವನ್ನು ಮತ್ತೊಂದು ಅಧಿಕೃತ ಸಂಸ್ಥೆಯಾದ ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಗೆ ನೀಡುವ ಬಗ್ಗೆ ಪ್ರಸ್ತಾಪಿಸಲಾಯಿತು. ಪ್ರತ್ಯೇಕವಾಗಿ ಒಬ್ಬ ವ್ಯಕ್ತಿಯನ್ನು ಸಲಹೆಗಾರರನ್ನಾಗಿ (Single Source Individual Consultant) ನೇಮಿಸುವುದಕ್ಕೆ ಸಮಿತಿಯು ಅನುಮೋದನೆಯನ್ನು ನೀಡಿತ್ತು. ಉಲ್ಲೇಖ (3)ರನ್ವಯ ಸದರಿ ವಿಷಯಕ್ಕೆ ದಿನಾಂಕ:13.7.2009 ರಂದು ಇ–ಮೇಲ್ ಸಂದೇಶದ ಮೂಲಕ ವಿಶ್ವಬ್ಯಾಂಕ್ ಸಹ ತನ್ನ ಸಹಮತಿಯನ್ನು ನೀಡಿದೆ. ಸದರಿ ಸಂಸ್ಥೆಗೆ ರೂ. 4,35,250–00(+ ಅನ್ವಯವಾಗುವಂತೆ ಸೇವಾ ತೆರಿಗೆ) ಗಳ ಸಲಹಾ ಸೇವಾ ಶುಲ್ಕವನ್ನು ನಿಗಧಿಪಡಿಸಿದೆ.

ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಎಫ್‌ಡಬ್ಲ್ಯೂ (ಪಿಆರ್) 123 ಡಬ್ಲ್ಯೂಬಿಎ 2009, ಬೆಂಗಳೂರು, ದಿನಾಂಕ:14ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ಸರ್ಕಾರವು, ಮಾದರಿ ಕರ್ನಾಟಕ ಸಾರ್ವಜನಿಕ ಆರೋಗ್ಯ ಕಾಯ್ದೆಯ ಕರಡನ್ನು ಪರಿಶೀಲಿಸುವ ಮತ್ತು ಅಂತಿಮಗೊಳಿಸುವ ಕಾರ್ಯವನ್ನು ಮತ್ತೊಂದು ಅಧಿಕೃತ ಸಂಸ್ಥೆಯಾದ ಕರ್ನಾಟಕ ಕಾನೂನು ಮತ್ತು ಸಂಸದೀಯ ಸುಧಾರಣಾ ಸಂಸ್ಥೆಗೆ ನೀಡುವ ಬಗ್ಗೆ ಪ್ರತ್ಯೇಕವಾಗಿ ಒಬ್ಬ ವ್ಯಕ್ತಿಯನ್ನು ಸಲಹೆಗಾರರನ್ನಾಗಿ ನೇಮಿಸುವುದಕ್ಕೆ (Single Source Individual Consultant)) ಈ ಸಂಬಂಧ ರೂ. 4,35,250–00 (+ ಅನ್ವಯವಾಗುವಂತೆ ಸೇವಾ ತೆರಿಗೆ) ಗಳನ್ನು ಸಲಹಾ ಸೇವಾ ಶುಲ್ಕವಾಗಿ ಕಂತುಗಳ ಮೂಲಕ ಸದರಿ ಸಂಸ್ಥೆಗೆ ಪಾವತಿಸಲು ಮಂಜೂರಾತಿ ನೀಡಿದೆ ಸದರಿ ಸಂಸ್ಥೆಯವರು ಕರ್ನಾಟಕ ಆರೋಗ್ಯ ವ್ಯವಸ್ಥೆ ಅಭಿವೃದ್ಧಿ ಮತ್ತು ಸುಧಾರಣಾ ಯೋಜನೆಯೊಂದಿಗೆ ಗುತ್ತಿಗೆ ನೇಮಕದ ಷರತ್ತು ಮತ್ತು ನಿಬಂಧನೆಗಳನ್ನೊಳಗೊಂಡ (Terms of Reference) ಕರಾರು ಒಪ್ಪಂದವನ್ನು ಮಾಡಿಕೊಳ್ಳತಕ್ಕದ್ದು.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2210–06–800–0–81(015) ಪೂರಕ ವೆಚ್ಚಗಳು" ಅಡಿಯಲ್ಲಿ 2009–10ನೇ ಸಾಲಿನಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2322

**ಶಂಕರಪ್ಪ**

ಸರ್ಕಾರದ ಉಪ ಕಾರ್ಯದರ್ಶಿ, (ಪ್ರ) ಕೆಹೆಚ್‌ಎಸ್‌ಡಿಆರ್‌ಪಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಎಂ. ಶರಣಬಸಪ್ಪ, ತಹಶೀಲ್ದಾರ್, ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ ಇವರನ್ನು ಸೇವೆಯಿಂದ ಅಮಾನತ್ತುಗೊಳಿಸುವ ಬಗ್ಗೆ.

**ಪ್ರಸ್ತಾವನೆ:**

ಬಿಜಾಪುರ ಜಿಲ್ಲೆಯಲ್ಲಿ ನೆರೆಪೀಡಿತ ಪ್ರದೇಶಗಳಿಗೆ ಮಾನ್ಯ ಮುಖ್ಯಮಂತ್ರಿಗಳು ಹಾಗೂ ಮಾನ್ಯ ಕಂದಾಯ ಸಚಿವರು ಭೇಟಿ ನೀಡಿದಾಗ ಅಲ್ಲಿರುವ ಸಾರ್ವಜನಿಕರು ಶ್ರೀ ಎಂ. ಶರಣಬಸಪ್ಪ, ತಹಶೀಲ್ದಾರ್, ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ ಇವರು ನೆರೆ ಪೀಡಿತ ಪ್ರದೇಶಗಳಲ್ಲಿ ಪ್ರವಾಹದಿಂದ ಭಾದಿತವಾದ ಜನರ ರಕ್ಷಣೆ ಮಾಡಲು ಕ್ರಮ ಕೈಗೊಂಡಿಲ್ಲವೆಂದು ಮಾನ್ಯ ಮುಖ್ಯಮಂತ್ರಿಗಳಲ್ಲಿ ಮೌಖಿಕವಾಗಿ ದೂರು ನೀಡಿರುತ್ತಾರೆ. ಪ್ರಕೃತಿ ವಿಕೋಪದಂತಹ ಸಮಯದಲ್ಲಿ ಜನರ ರಕ್ಷಣೆಗೆ ಕ್ರಮ ಕೈಗೊಳ್ಳದಿರುವುದು ಗಂಭೀರ ಸ್ವರೂಪದ ತಪ್ಪೆಸಗಿರುವುದರಿಂದ ಹಾಗೂ ಸರ್ಕಾರಿ ನೌಕರರಿಗೆ ತರವಲ್ಲದ ರೀತಿಯಲ್ಲಿ ನಡೆದುಕೊಂಡಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ (ನಡತೆ) ನಿಯಮಗಳು 1966ನ್ನು ಉಲ್ಲಂಘಿಸಿದಂತಾಗಿದ್ದು, ಮಾನ್ಯ ಮುಖ್ಯಮಂತ್ರಿಗಳು ಶ್ರೀ ಎಂ. ಶರಣಬಸಪ್ಪ, ತಹಶೀಲ್ದಾರ್, ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ ಇವರನ್ನು ಅಮಾನತ್ತಿನಲ್ಲಿಡಲು ಸ್ಥಳದಲ್ಲಿಯೇ ಆದೇಶಿಸಿರುತ್ತಾರೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ಕಂಇ 23 ಎಡಿಇ 2009, ಬೆಂಗಳೂರು, ದಿನಾಂಕ:3ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(1) (ಡಿ) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಂ. ಶರಣಬಸಪ್ಪ, ತಹಶೀಲ್ದಾರ್, ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ ಇವರನ್ನು ಇಲಾಖಾ ವಿಚಾರಣೆ ಬಾಕಿ ಇರಿಸಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 98ರನ್ವಯ ಜೀವನಾಧಾರ ಭತ್ಯೆ ಪಡೆಯಲು ಅರ್ಹರಿರುತ್ತಾರೆ. ಅಮಾನತ್ತಿನ ಅವಧಿಯಲ್ಲಿ ಜಿಲ್ಲಾಧಿಕಾರಿಗಳು, ಬಿಜಾಪುರ ಜಿಲ್ಲೆ ಇವರ ಅನುಮತಿ ಪಡೆಯದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಜಿಲ್ಲಾಧಿಕಾರಿಗಳ ಕಛೇರಿ ಬಿಜಾಪುರ ಜಿಲ್ಲೆ ಇಲ್ಲಿ ಚುನಾವಣಾ ತಹಶೀಲ್ದಾರರಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಜಿ. ಬಸವನಗೌಡ ಇವರನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ತಹಶೀಲ್ದಾರ್, ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ ಇಲ್ಲಿನ ಹುದ್ದೆಯಲ್ಲಿ ಅಧಿಕ ಪ್ರಭಾರದಲ್ಲಿ ಇರಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2323

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

**ವಿಷಯ :** ಶ್ರೀ ಬಿ.ಡಿ. ಶ್ರೀಶೈಲ, ನಿವೃತ್ತ ತಹಶೀಲ್ದಾರ್, ಆಲೂರು ತಾಲ್ಲೂಕು ಹಾಸನ ಜಿಲ್ಲೆ ಇವರ ವಿರುದ್ಧ ಶಿಸ್ತು ಕ್ರಮ ಕುರಿತು. ಆರೋಪದಿಂದ ದೋಷಮುಕ್ತ ಮಾಡುವ ಬಗ್ಗೆ.

**ಓದಲಾಗಿದೆ :**

1. ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ ಇವರ ಪತ್ರ ಸಂ :ಸಿಬ್ಬಂದಿ (1) 344/2005–06, ದಿನಾಂಕ :27.12.2005.
2. ಸರ್ಕಾರದ ಆದೇಶ ಸಂ :ಆರ್‌ಡಿ 5 ಎಡಿಇ 2006, ದಿನಾಂಕ :24.9.2009
3. ಅಧಿಕಾರಿಗೆ ಜಾರಿ ಮಾಡಲಾಗಿದ್ದ ಕಾರಣ ಕೇಳುವ ನೋಟೀಸು ದಿನಾಂಕ :24.9.2008.
4. ಅಧಿಕಾರಿಯವರ ಲಿಖಿತ ಹೇಳಿಕೆ ದಿನಾಂಕ :3.11.2008.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (1)ರಲ್ಲಿ ಜಿಲ್ಲಾಧಿಕಾರಿಗಳು, ಹಾಸನ ಜಿಲ್ಲೆ, ಹಾಸನ ಇವರು ಶ್ರೀ ಬಿ.ಡಿ. ಶ್ರೀಶೈಲ, ನಿವೃತ್ತ ತಹಶೀಲ್ದಾರ್, ಆಲೂರು ಇವರ ವಿರುದ್ಧ ಈ ಕೆಳಕಂಡ ಆರೋಪಗಳನ್ನು ಹೊರಿಸಿ, ಅನುಬಂಧ–1 ರಿಂದ 4 ರವರೆಗೆ ದೋಷಾರೋಪಣೆ ಪಟ್ಟಿಗಳೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

**ಆರೋಪ–1:** ದಿನಾಂಕ:2.11.2005 ರಿಂದ 4.11.2005ರ ಅವಧಿಯಲ್ಲಿ ಕೇಂದ್ರ ಸ್ಥಾನದಲ್ಲಿ ವಾಸ್ತವ್ಯವಿರಲಿಲ್ಲವೆಂದು

**ಆರೋಪ–2:** ದಿನಾಂಕ:11.10.2005, 12.10.2005 ಮತ್ತು 13.10.2005ರಂದು ರಜೆ ಮಂಜೂರಿ ಹಾಗೂ ಅನುಮತಿ ಪಡೆಯದೇ ಕೇಂದ್ರ ಸ್ಥಾನದಲ್ಲಿರಲಿಲ್ಲವೆಂದು.

**ಆರೋಪ–3:** 2004–05ನೇ ಸಾಲಿನ ಭೂ ಕಂದಾಯ ನೀರು ತೆರಿಗೆ ಮತ್ತು ಇತರೆ ಬಾಕಿ ವಸೂಲಾತಿಯಲ್ಲಿ ಆಸಕ್ತಿ ವಹಿಸಿರುವುದಿಲ್ಲವೆಂದು.

**ಆರೋಪ–4:** ಅನಧಿಕೃತ ಸಾಗುವಳಿ ಸಕ್ರಮಗೊಳಿಸಲು ನಮೂನೆ 53ರಡಿಯಲ್ಲಿ ಬಾಕಿಯಿರುವ ಅರ್ಜಿಗಳ ಬಗ್ಗೆ ಕ್ರಮ ಜರುಗಿಸಿಲ್ಲವೆಂದೂ ಅತೀವೃಷ್ಟಿಯಿಂದ ಹಾನಿಗೊಳಗಾದ ಬೆಳೆಗಳಿಗೆ ಸಂಬಂಧಿಸಿದ ಖಾತೆದಾರರಿಗೆ ಪರಿಹಾರ ವಿತರಣೆ ಮಾಡಲು ಜಿಲ್ಲಾಧಿಕಾರಿಯವರಿಂದ ಬಿಡುಗಡೆಯಾದ ಮೊಬಲಗನ್ನು ಸಂತ್ರಸ್ಥರಿಗೆ ವಿತರಣೆ ಮಾಡಲು ಕ್ರಮ ವಹಿಸಿಲ್ಲವೆಂದು.

**ಆರೋಪ–5:** ಅವಧಿ ಮೀರಿದ ಖಾತೆ ಬದಲಾವಣೆ ಪ್ರಕರಣಗಳನ್ನು ಬಾಕಿ ಉಳಿಸಿಕೊಂಡಿರುವುದಾಗಿಯೂ ಕೇಂದ್ರಸ್ಥಾನದಲ್ಲಿ ವಾಸವಿರದೇ ಪ್ರತಿದಿನ ಹಾಸನದಿಂದ ಓಡಾಡಲು ಸರ್ಕಾರಿ ವಾಹನವನ್ನು ದುರುಪಯೋಗ ಪಡಿಸಿಕೊಳ್ಳಲಾಗಿದೆಯೆಂದು.

ಮೇಲೆ ಓದಲಾದ ಕ್ರ.ಸಂ(2)ರ ದಿನಾಂಕ:24.9.2008ರ ಆದೇಶದಲ್ಲಿ ಶ್ರೀ ಬಿ.ಡಿ. ಶ್ರೀಶೈಲ, ಹಿಂದಿನ ತಹಶೀಲ್ದಾರ್, ಆಲೂರು ತಾಲ್ಲೂಕು, ಹಾಸನ ಜಿಲ್ಲೆ ಇವರು ನಿವೃತ್ತರಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ ನಿಯಮ 214 ರಡಿಯಲ್ಲಿ ಇಲಾಖಾ ವಿಚಾರಣೆ ನಡೆಸಲು ಆದೇಶ ಹೊರಡಿಸಲಾಗಿತ್ತು.

ಮೇಲೆ ವಿವರಿಸಿರುವ ಜಿಲ್ಲಾಧಿಕಾರಿಗಳ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಮೇಲೆ ಓದಲಾದ ಕ್ರ.ಸಂ. (3)ರಲ್ಲಿ ದಿನಾಂಕ:24.9.2008ರಲ್ಲಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿತ್ತು. ಸದರಿ ನೋಟೀಸಿಗೆ ಮೇಲೆ ಓದಲಾದ ಕ್ರ.ಸಂ. (4)ರನ್ವಯ ಲಿಖಿತ ಸಮಜಾಯಿಷಿಯನ್ನು ನೀಡಿ, ದೋಷಾರೋಪಣೆಯಲ್ಲಿ ಹೊರಿಸಿರುವ ಆಪಾದನೆಗಳು ದೈನಂದಿನ ಕಛೇರಿಯಲ್ಲಿನ ಅಧೀನ ಸಿಬ್ಬಂದಿ ಒಡಗೂಡಿ ನಿರ್ವಹಿಸಬೇಕಾದ ಕೆಲಸಗಳಾಗಿದ್ದು, ತಹಶೀಲ್ದಾರ್ ಅವರೇ ವೈಯಕ್ತಿಕವಾಗಿ ವಿಲೇವಾರಿ ಮಾಡುವಂತಹ ಪ್ರಕರಣಗಳಾಗಿರುವುದಿಲ್ಲವೆಂದು ಈ ಎಲ್ಲಾ ಆರೋಪಗಳು ನಿರ್ದಿಷ್ಟ ಸ್ಪಷ್ಟ ಪ್ರಕರಣಕ್ಕೆ ಸಂಬಂಧಿಸದೆ ಒಟ್ಟಾರೆ ಆಯಾಯ ವಿಷಯಗಳ ಮೇಲೆ ತಾಲ್ಲೂಕಿನಲ್ಲಿ ನಿರ್ವಹಿಸತಕ್ಕ ದೈನಂದಿನ ಕೆಲಸಗಳಾಗಿರುತ್ತದೆ. ಕಾರಣ ತಹಶೀಲ್ದಾರ್ ಹುದ್ದೆಯಿಂದ ನಿವೃತ್ತಿ ಹೊಂದಿದ ನಂತರವೂ ಅವರ ಮೇಲೆ ಕ್ರಮ ಕೈಗೊಳ್ಳ ಬಹುದಾದಂತ ಗುರುತರ ಆರೋಪಗಳು ಇರುವುದಿಲ್ಲವೆಂದು ತಿಳಿಸಿ ಅವರ ವಿರುದ್ಧ ಹೂಡಲು ಉದ್ದೇಶಿಸಿರುವ ಇಲಾಖಾ ವಿಚಾರಣೆಯನ್ನು ಕೈಬಿಡುವಂತೆ ಕೋರಿದ್ದಾರೆ.

ಅದರಂತೆ ಆಪಾದಿತರ ಮೇಲೆ ಹೊರಿಸಲಾದ ಆರೋಪ ಹಾಗೂ ಈ ಆಪಾದನೆಗಳಿಗೆ ಆಪಾದಿತರುಗಳು ನೀಡಿರುವ ಹೇಳಿಕೆಯನ್ನು ಪರಿಶೀಲಿಸಿದ ಸರ್ಕಾರವು ಸದರಿ ಅಧಿಕಾರಿಯವರ ವಿರುದ್ಧ ಹೊರಿಸಲಾದ ಆರೋಪಗಳಲ್ಲಿ ಸರ್ಕಾರಕ್ಕೆ ಉಂಟಾಗಿರುವ ನಷ್ಟದ ಬಗ್ಗೆ ಯಾವುದೇ ಪ್ರಸ್ತಾಪ ಇರುವುದಿಲ್ಲ., ಈ ಎಲ್ಲಾ ಆಪಾದನೆಗಳು ಕರ್ತವ್ಯ ಲೋಪಕ್ಕೆ ಸಂಬಂಧಿಸಿರುವುದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಿ, ದಂಡನೆ ವಿಧಿಸಬೇಕಾದಂತಹ ಪ್ರಕರಣವಾಗಿರುವುದಿಲ್ಲವಾದ್ದರಿಂದ ಉದ್ದೇಶಿಸಿರುವ ಇಲಾಖಾ ವಿಚಾರಣೆಯನ್ನು ಕೈಬಿಡಲು ಸರ್ಕಾರವು ತೀರ್ಮಾನಿಸಿ,. ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಕಂಇ 05 ಎಡಿಇ 2006, ಬೆಂಗಳೂರು, ದಿನಾಂಕ:1ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ ಶ್ರೀ ಬಿ.ಡಿ. ಶ್ರೀಶೈಲ, ನಿವೃತ್ತ ತಹಶೀಲ್ದಾರ್ ಇವರ ವಿರುದ್ಧ ಹೂಡಲು ಉದ್ದೇಶಿಸಿದ್ದ ಇಲಾಖಾ ವಿಚಾರಣೆಯನ್ನು ಕೈ ಬಿಟ್ಟು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2324

**ಎಸ್.ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಮೈಸೂರು ಜಿಲ್ಲೆ, ಹುಣಸೂರು ತಾಲ್ಲೂಕು ಸೂಳೆಕೆರೆ ಕಾವಲ್ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯದ ಆದೇಶದಂತೆ ಹೆಚ್ಚಿನ ಪರಿಹಾರ ಧನ ಪಾವತಿಸುವ ಕುರಿತು.

**ಓದಲಾಗಿದೆ :** ಮುಖ್ಯ ಇಂಜಿನಿಯರ್ ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ : 9.3.2009ರ ಪತ್ರ ಸಂ :ಮುಸನೀ(ದ)/ಲೆಶಾ/ಲೆಸ1/3/ಭೂಸ್ವಾಧೀನ/2008–09/605.

**ಪ್ರಸ್ತಾವನೆ:**

ಮೇಲೆ ಓದಲಾದ ಬೆಂಗಳೂರು ಸಣ್ಣ ನೀರಾವರಿ ದಕ್ಷಿಣ ವಲಯದ ಮುಖ್ಯ ಇಂಜಿನಿಯರ್ ರವರ ಪತ್ರದಲ್ಲಿ ಮೈಸೂರು ಜಿಲ್ಲೆ, ಹುಣಸೂರು ತಾಲ್ಲೂಕು, ಸೂಳೆಕೆರೆಕಾವಲ್ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಳ್ಳಲಾದ ಜಮೀನುಗಳಿಗೆ ನ್ಯಾಯಾಲಯವು ನೀಡಿದ ತೀರ್ಪಿನ ಅನುಸಾರ ಹೆಚ್ಚಿನ ಪರಿಹಾರಧನ ಪಾವತಿಸಲು

ಅನುದಾನ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದ ಜಮೀನುಗಳ ಭೂಸ್ವಾಧೀನದ ಪ್ರಕ್ರಿಯೆಯ ವಿವರಗಳು ಈ ಕೆಳಕಂಡಂತಿದೆ:

– ಕರ್ನಾಟಕ ಭೂಸ್ವಾಧೀನ ಕಾಯ್ದೆಯ ಕಲಂ 4(1)ರಡಿ ಅಧಿಸೂಚನೆ ಹೊರಡಿಸಿದ ದಿನಾಂಕ:17.5.1993

– ಕರ್ನಾಟಕ ಭೂಸ್ವಾಧೀನ ಕಾಯ್ದೆಯಡಿಯಲ್ಲಿ ಭೂಸ್ವಾಧೀನಾಧಿಕಾರಿಗಳು ಪರಿಹಾರ ಧನದ ಐತೀರ್ಪು ಘೋಷಿಸಿದ ದಿನಾಂಕ :17.8.1995

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳ ಭೂಮಾಲೀಕರು ಭೂಸ್ವಾಧೀನಾಧಿಕಾರಿಗಳ ಪರಿಹಾರ ಧನದ ಐತೀರ್ಪಿನಂತೆ ಹಣ ಪಡೆದು, ಹೆಚ್ಚಿನ ಪರಿಹಾರಧನಕ್ಕಾಗಿ ಭೂಸ್ವಾಧೀನ ಕಾಯ್ದೆ ಕಲಂ 18(1)ರಡಿ ಹುಣಸೂರು ಸಿವಿಲ್ ನ್ಯಾಯಾಲಯದಲ್ಲಿ ಭೂಸ್ವಾಧೀನ ಪ್ರಕರಣವನ್ನು ದಾಖಲಿಸಿದ್ದು. ಈ ಪ್ರಕರಣದಲ್ಲಿ ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿದೆ. ಸದರಿ ತೀರ್ಪನ್ನು ಪ್ರಶ್ನಿಸಿ ಭೂಮಾಲೀಕರು ಪುನಃ ಮೈಸೂರು ಜಿಲ್ಲಾ ನ್ಯಾಯಾಲಯದಲ್ಲಿ ಎಲ್.ಎ.ಸಿ.ಎ. ಪ್ರಕರಣವನ್ನು ದಾಖಲಿಸಿದ್ದು ಜಿಲ್ಲಾ ನ್ಯಾಯಾಲಯವು ಪರಿಹಾರ ಧನವನ್ನು ಪ್ರತಿ ಎಕರೆಗೆ ರೂ 40,000/– ರಂತೆ ನಿಗದಿಪಡಿಸಿದೆ ಜಿಲ್ಲಾ ನ್ಯಾಯಾಲಯದ ತೀರ್ಪಿನ ವಿರುದ್ಧ ಮೇಲ್ಮನವಿ ಸಲ್ಲಿಸದಿರಲು ಕಂದಾಯ ಇಲಾಖೆಯು ಅಭಿಪ್ರಾಯ ನೀಡಿದೆ.

ಸಿವಿಲ್ ನ್ಯಾಯಾಲಯವು ಹೆಚ್ಚಿನ ಪರಿಹಾರ ಧನಕ್ಕೆ ತೀರ್ಪು ನೀಡಿರುವ ಪ್ರಕರಣಗಳ ವಿವರ ಕೆಳಕಂಡಂತಿದೆ :

| ಕ್ರ.ಸಂ | ಎಲ್‌ಎಸಿಎ ಪ್ರಕರಣ ಸಂಖ್ಯೆ | ಹುಣಸೂರು ತಾಲ್ಲೂಕು, ಸೂಳೆಕೆರೆ ಕಾವಲ್ ಗ್ರಾಮದ ಸ.ನಂ | ವಿಸ್ತೀರ್ಣ ಎ–ಗುಂ | ಪರಿಹಾರ ಮೊತ್ತ ರೂ.ಗಳಲ್ಲಿ |
|---|---|---|---|---|
| 1 | 140/96 | 11 | 2–07 | 294111 |

- ಪರಿಹಾರ ಧನದ ಮೊತ್ತದಲ್ಲಿ ನ್ಯಾಯಾಲಯದ ವೆಚ್ಚ ಸಹ ಸೇರಿದೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ :ಸನೀಇ 57 ಭೂಸ್ವಾಪ್ರ 2009, ಬೆಂಗಳೂರು, ದಿನಾಂಕ :24ನೇ ಸೆಪ್ಟೆಂಬರ್, 2009**

ಮೈಸೂರು ಜಿಲ್ಲೆ,. ಹುಣಸೂರು ತಾಲ್ಲೂಕು, ಸೂಳೆಕೆರೆಕಾವಲ್ ಗ್ರಾಮದ ಸಣ್ಣ ನೀರಾವರಿ ಕೆರೆ ನಿರ್ಮಾಣಕ್ಕಾಗಿ ಸ್ವಾಧೀನಪಡಿಸಿಕೊಂಡ ಸೂಳೆಕೆರೆಕಾವಲ್ ಗ್ರಾಮಕ್ಕೆ ಸೇರಿದ ಮೇಲ್ಕಂಡ ಸರ್ವೆ ನಂಬರ್‌ನ ಜಮೀನಿಗೆ ಜಿಲ್ಲಾ ನ್ಯಾಯಾಲಯವು ಎಲ್.ಎ.ಸಿ.ಎ ಪ್ರಕರಣದಲ್ಲಿ ನೀಡಿರುವ ತೀರ್ಪಿನಂತೆ ಹಾಗೂ ಭೂಸ್ವಾಧೀನ ಕಾಯ್ದೆಯಲ್ಲಿಯ ಸೂಚನೆಗಳಂತೆ ಲೆಕ್ಕಹಾಕಿದ ಪರಿಹಾರ ಧನ ಮೊತ್ತ ರೂ. 2,94,111/–ಗಳನ್ನು (ಎರಡು ಲಕ್ಷದ ತೊಂಭತ್ತನಾಲ್ಕು ಸಾವಿರದ ನೂರ ಹನ್ನೊಂದು ರೂಪಾಯಿಗಳು ಮಾತ್ರ) ಪಾವತಿಸಲು ಸರ್ಕಾರವು ಅನುಮೋದನೆ ನೀಡಿದೆ. ಹಣ ಪಾವತಿಗೆ ಮೊದಲು ಮತ್ತೊಮ್ಮೆ ಲೆಕ್ಕಾಚಾರ ತಃಖ್ತೆಯನ್ನು ದೃಢೀಕರಿಸಿಕೊಂಡು ಪಾವತಿಸತಕ್ಕದ್ದು ಹಾಗೂ ಎರಡನೇ ಬಾರಿ ಪಾವತಿಯಾಗದಂತೆ ಎಚ್ಚರವಹಿಸತಕ್ಕದ್ದು.

ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯದ ಲೆಕ್ಕಶೀರ್ಷಿಕೆ 4702–00–800–1–00–ಭೂಸ್ವಾಧೀನ ವೆಚ್ಚಗಳು ಮತ್ತು ಕ್ಲೇಂಗಳು–ಇತ್ಯರ್ಥ 132 ಬಂಡವಾಳ ವೆಚ್ಚಗಳ ಅಡಿಯಲ್ಲಿ ಸಣ್ಣ ನೀರಾವರಿ ಇಲಾಖೆಗೆ ಒದಗಿಸಿರುವ ಅನುದಾನದಿಂದ ಭರಿಸಿಕೊಳ್ಳತಕ್ಕದ್ದು.

ಭೂಸ್ವಾಧೀನಕ್ಕೊಳಪಟ್ಟ ಜಮೀನುಗಳು ಇನ್ನೂ ಸಣ್ಣ ನೀರಾವರಿ ಇಲಾಖೆಯ ಹೆಸರಿಗೆ ವರ್ಗಾವಣೆಯಾಗದಿದ್ದಲ್ಲಿ, ಕೂಡಲೇ ಸಂಬಂಧಿಸಿದ ಸಣ್ಣ ನೀರಾವರಿ ಅಧಿಕಾರಿಗಳು ವರ್ಗಾವಣೆ ಬಗ್ಗೆ ಕ್ರಮ ಕೈಗೊಳ್ಳತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 2008, ದಿನಾಂಕ :16.5.2008ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2326

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## ಒಳಾಡಳಿತ ಸಚಿವಾಲಯ

**ವಿಷಯ :** ಬೈಲಹೊಂಗಲದ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಯ ಹಿರಿಯ ಬೆರಳಚ್ಚುಗಾರರ ಒಂದು ಹುದ್ದೆಯನ್ನು ಮತ್ತು ಚಿಕ್ಕನಾಯಕನಹಳ್ಳಿಯ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ ಬೆರಳಚ್ಚುಗಾರರ ಹುದ್ದೆಗೆ ಪರಸ್ಪರ ಸ್ಥಳಾಂತರಿಸುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂ :ಲಾ 219 ಎಲ್‌ಸಿಇ 84, ದಿನಾಂಕ :22.12.1984.
2. ಉಪ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ನಡವಳಿ ಸಂ :ಡಿವೈಡಿಪಿಎನ್/ಎಸಿಟಿ–1/535/ಎಪಿಪಿಟಿ/ಟೈಪಿಸ್ಟ್/85, ದಿನಾಂಕ :19.6.1985
3. ಸರ್ಕಾರದ ಆದೇಶ ಸಂ :ಲಾ 219 ಎಲ್‌ಸಿಇ 84, ದಿನಾಂಕ :19.8.1985.

4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಆದೇಶ ಸಂ :ಡಿಪಿಎನ್/ಇಎಸ್ಟಿ/371/1985, ದಿನಾಂಕ :26.8.1985.
5. ಸರ್ಕಾರದ ಆದೇಶ ಸಂ :ಲಾ 262 ಪಿಪಿಇ 95, ದಿನಾಂಕ :24.4.1996.
6. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರದ ಸಂಖ್ಯೆ :ಡಿಪಿಎನ್/ಸಿಶಾ2/303/2008–09, ದಿನಾಂಕ :25.3.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:22.12.1984ರ ಸರ್ಕಾರದ ಆದೇಶದಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯಲ್ಲಿ 51 ಬೆರಳಚ್ಚುಗಾರ–ವಾ–ಸಹಾಯಕರ ಹುದ್ದೆಗಳನ್ನು ಸೃಜಿಸಿದ್ದು, ಅದರಲ್ಲಿ ಒಂದು ಬೆರಳಚ್ಚುಗಾರ–ವಾ–ಸಹಾಯಕ ಹುದ್ದೆಯನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ:19.6.1985 ಅಭಿಯೋಗ ಉಪ ನಿರ್ದೇಶಕರ ನಡವಳಿಯಲ್ಲಿ ಬೈಲಹೊಂಗಲದ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಗೆ ನೀಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ದಿನಾಂಕ:19.8.1985ರ ಸರ್ಕಾರದ ಆದೇಶದಲ್ಲಿ ಪೊಲೀಸ್ ಇಲಾಖೆಯಿಂದ ಹಸ್ತಾಂತರಗೊಂಡ ಹಲವು ಹುದ್ದೆಗಳಲ್ಲಿ 16 ಹುದ್ದೆಗಳನ್ನು ಬೆರಳಚ್ಚುಗಾರ–ವಾ–ಸಹಾಯಕರ ಹುದ್ದೆಗಳನ್ನಾಗಿ ಉನ್ನತೀಕರಿಸಿದ್ದು, ಅದರಲ್ಲಿ ಒಂದು ಬೆರಳಚ್ಚುಗಾರ–ವಾ–ಸಹಾಯಕ ಹುದ್ದೆಯನ್ನು ಮೇಲೆ (4)ರಲ್ಲಿ ಓದಲಾದ ದಿನಾಂಕ:19.8.1985 ಅಭಿಯೋಗ ನಿರ್ದೇಶಕರ ಆದೇಶದಲ್ಲಿ ಚಿಕ್ಕನಾಯಕನಹಳ್ಳಿಯ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಗೆ ನೀಡಿದೆ.

ಮೇಲೆ (5)ರಲ್ಲಿ ಓದಲಾದ ದಿನಾಂಕ:24.4.1996ರ ಸರ್ಕಾರ ಆದೇಶದಲ್ಲಿ, ಮೇಲೆ (2)ರಲ್ಲಿ ಓದಲಾದ ದಿನಾಂಕ:19.6.1985ರ ಅಭಿಯೋಗ ಉಪ ನಿರ್ದೇಶಕರ ನಡವಳಿಯಲ್ಲಿ ನೀಡಲಾಗಿದ್ದ ಬೆರಳಚ್ಚುಗಾರರ–ವಾ–ಸಹಾಯಕ ಹುದ್ದೆಯನ್ನು ಹಿರಿಯ ಬೆರಳಚ್ಚುಗಾರರ ಹುದ್ದೆಗೆ ಮೇಲ್ದರ್ಜೆಗೇರಿಸಿದೆ.

ಮೇಲೆ (6)ರಲ್ಲಿ ಓದಲಾದ ದಿನಾಂಕ:25.3.2009ರ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಪತ್ರದಲ್ಲಿ ಬೈಲಹೊಂಗಲದ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯಗಳ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿ ಒಂದು ಹಿರಿಯ ಬೆರಳಚ್ಚುಗಾರರ ಹುದ್ದೆಯನ್ನು, ಸದರಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ನೌಕರರಾದ ಶ್ರೀ ನಂಜುಂಡಸ್ವಾಮಿರವರೊಂದಿಗೆ ಚಿಕ್ಕನಾಯಕನಹಳ್ಳಿಯ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಯ ಒಂದು ಬೆರಳಚ್ಚುಗಾರರ ಹುದ್ದೆಗೆ ಪರಸ್ಪರ ಸ್ಥಳಾಂತರಿಸುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 210 ಪಿಪಿಇ 2009, ಬೆಂಗಳೂರು, ದಿನಾಂಕ:9ನೇ ಅಕ್ಟೋಬರ್, 2009**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಚಿಕ್ಕನಾಯಕನಹಳ್ಳಿಯ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ ನ್ಯಾಯಾಲಯದ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಯ ಬೆರಳಚ್ಚುಗಾರರ ಹುದ್ದೆಯನ್ನು ಬೈಲಹೊಂಗಲದ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಗೆ ಸ್ಥಳಾಂತರಿಸಿ, ಬೈಲಹೊಂಗಲದ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಯ ಹಿರಿಯ ಬೆರಳಚ್ಚುಗಾರರ ಹುದ್ದೆಯನ್ನು ಹಾಲಿ ಅಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿಯೊಂದಿಗೆ ಚಿಕ್ಕನಾಯಕನಹಳ್ಳಿಯ ಸಿವಿಲ್ ನ್ಯಾಯಾಧೀಶರು (ಕಿರಿಯ ವಿಭಾಗ) ಮತ್ತು ಜೆ.ಎಂ.ಎಫ್.ಸಿ. ನ್ಯಾಯಾಲಯದ ಸಹಾಯಕ ಸರ್ಕಾರಿ ಅಭಿಯೋಜಕರ ಕಛೇರಿಗೆ ಸ್ಥಳಾಂತರಿಸಿದೆ.

ಸದರಿ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂ:ಒಸಾಇ 22020 ಆಂಆಸ 2009, ದಿನಾಂಕ:28.4.2009ರನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.7.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರವನ್ನು ಚಲಾಯಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2328

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾನೂನು ಮತ್ತು ಸುವ್ಯವಸ್ಥೆ ಹಾಗೂ ಕಾಫಿಪೋಸ ಮತ್ತು ಅಭಿಯೋಗಗಳು )

**ವಸತಿ ಸಚಿವಾಲಯ**

**ವಿಷಯ :** ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ JNNURM ಅನುಷ್ಠಾನಕ್ಕಾಗಿ ಲೆಕ್ಕಾಧೀಕ್ಷಕರುಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ :**
1. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಪತ್ರ ಸಂಖ್ಯೆ : ಕಕೊನಿಮ: ಆಡಳಿತ:ಲೆಕ್ಕಾಧೀಕ್ಷಕರು :ನಿ :2009–10/118, ದಿನಾಂಕ :23/28–5–09
2. ದಿನಾಂಕ :11.5.2009 ರಂದು ನಡೆದ ಎಸ್‌ಎಲ್‌ಇಸಿ (ಐಹೆಚ್‌ಎಸ್‌ಡಿಪಿ)ಯ 8ನೇ ಸಭೆಯ ನಡವಳಿ.
3. ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆಯ ಅಧಿಕೃತ ಜ್ಞಾಪನ ಸಂಖ್ಯೆ :ರಾಲೆಪ 1 ಸಿಅಬ 2008, ದಿನಾಂಕ :16.7.2009.
4. ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆಯ ಅಧಿಕೃತ ಜ್ಞಾಪನ ಸಂಖ್ಯೆ :ರಾಲೆವ 1 ಸಿಅವ 2009/1629, ದಿನಾಂಕ :21.7.2009.
5. ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರ ಪತ್ರ ಸಂಖ್ಯೆ :ಕಕೊನಿಮ :ಆಡಳಿತ :ಲೆಕ್ಕಾಧೀಕ್ಷಕರು :2009–10/332, ದಿನಾಂಕ :31.7.2009.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(1)ರ ಪತ್ರದಲ್ಲಿ ಆಯುಕ್ತರು, ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರು ಮಂಡಳಿ ವತಿಯಿಂದ ಕೇಂದ್ರ ಸರ್ಕಾರದ ಪುರಸ್ಕೃತ ಯೋಜನೆಗಳಾದ IHSDP ಮತ್ತು BSUP ಯೋಜನೆಗಳನ್ನು ರಾಜ್ಯದ್ಯಾಂತ ಸುಮಾರು 800 ಕೋಟಿ ರೂ.ಗಳ ವೆಚ್ಚದಲ್ಲಿ ಮನೆಗಳನ್ನು ಮತ್ತು ಅಭಿವೃದ್ಧಿ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿದ್ದು ಸದರಿ ಯೋಜನೆಗಳ ನಿರ್ವಹಣೆಗೆ ಪೂರಕವಾದ ಸಿಬ್ಬಂದಿ ಕೊರತೆಯನ್ನು ಮಂಡಳಿಯು ಎದುರಿಸುತ್ತಿದ್ದು, ಬೃಹದಾಕಾರದ ಕಾಮಗಾರಿಗಳ ಗುಣಮಟ್ಟವನ್ನು ಕಾಪಾಡಿಕೊಂಡು ಯೋಜಿಸಿದ ಅವಧಿಯೊಳಗೆ ಪೂರ್ಣಗೊಳಿಸಲು ಮಂಡಳಿಗೆ ಪೂರಕ ತಾಂತ್ರಿಕ ಸಿಬ್ಬಂದಿಯ ಕೊರತೆ ಇರುತ್ತದೆ. ಸದರಿ ಯೋಜನೆಗಳನ್ನು ನಿಗಧಿತ ಕಾಲಾವಧಿಯೊಳಗೆ ಪೂರ್ಣಗೊಳಿಸಬೇಕಾಗಿರುವ ಹಿನ್ನೆಲೆಯಲ್ಲಿ, ಮೇಲೆ ಓದಲಾದ ಕ್ರಮ ಸಂಖ್ಯೆ (2)ರಲ್ಲಿ ದಿನಾಂಕ 11.5.08ರಂದು ನಡೆದ ರಾಜ್ಯಮಟ್ಟದ ಅಧಿಕಾರಯುಕ್ತ ಸಮಿತಿ (IHSDP) ಸಭೆಯಲ್ಲಿ ಕೆಲವು ತಾಂತ್ರಿಕ/ತಾಂತ್ರಿಕೇತರ ಹುದ್ದೆಗಳನ್ನು ನಿಯೋಜನೆ /ಗುತ್ತಿಗೆ./ಹೊರಗುತ್ತಿಗೆ ಆಧಾರದ ಮೇಲೆ ಸಮಿತಿಗೆ ದಿನಾಂಕ:4.8.07ರ ಆದೇಶದಲ್ಲಿ ನೀಡಲಾಗಿರುವ ಅಧಿಕಾರದನ್ವಯ ಯೋಜನಾ ಅವಧಿಗೆ ಸೀಮಿತವಾಗಿ, ಮಂಡಳಿಗೆ ಏಳು ಸಂಖ್ಯೆ ಲೆಕ್ಕಾಧೀಕ್ಷಕರ ಸೇವೆಯನ್ನು ಪಡೆಯುವ ಬಗ್ಗೆ ನಿರ್ಣಯಿಸಲಾಗಿರುತ್ತದೆ. ಅದರಂತೆ ಮೇಲೆ ಓದಲಾದ ಕ್ರ.ಸಂ. (1)ರಲ್ಲಿ ಆಯುಕ್ತರು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿ ರವರು ವಸತಿ ಇಲಾಖೆಯ ವಶಕ್ಕೆ ಲೆಕ್ಕಾಧೀಕ್ಷಕರ ಸೇವೆಯನ್ನು ನೀಡಬೇಕೆಂದು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3) ಮತ್ತು (4)ರಲ್ಲಿ ರಾಜ್ಯ ಲೆಕ್ಕಪತ್ರ ಇಲಾಖೆಯು ಶ್ರೀ ಎನ್. ಮಹದೇವಯ್ಯ, ಶ್ರೀ ಆರ್.ಎಸ್. ಹರವಾಳಕರ್, ಇಬ್ಬರು, ಲೆಕ್ಕಾಧೀಕ್ಷಕರುಗಳನ್ನು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಹೊಸದಾಗಿ ಸೃಜಿಸಿರುವ ಹುದ್ದೆಗೆ ನಿಯೋಜಿಸಲು ಸದರಿ ಲೆಕ್ಕಾಧೀಕ್ಷಕರುಗಳ ಸೇವೆಯನ್ನು ವಸತಿ ಇಲಾಖೆಯ ವಶಕ್ಕೆ ನೀಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರಲ್ಲಿ ಆಯುಕ್ತರು, ಎಸ್‌ಎಲ್‌ಇಸಿ ಸಭೆಯಲ್ಲಿ ಮಂಡಳಿ ವತಿಯಿಂದ ಕೇಂದ್ರ ಸರ್ಕಾರದ ಪುರಸ್ಕೃತ ಯೋಜನೆಗಳಾದ ಐಹೆಚ್‌ಎಸ್‌ಡಿಪಿ ಮತ್ತು ಬಿಎಸ್‌ಯುಪಿ ಯೋಜನೆಗಳ ನಿರ್ವಹಣೆಗೆ ಅಗತ್ಯವಿರುವ 7 ಲೆಕ್ಕಾಧೀಕ್ಷಕರುಗಳ ಹುದ್ದೆಗಳನ್ನು ನಿಯೋಜನೆ ಮೂಲಕ ಭರ್ತಿ ಮಾಡಲು ನಿರ್ಣಯ ಕೈಗೊಳ್ಳಲಾಗಿದ್ದು, ಸದರಿ ನಿರ್ಣಯದಂತೆ ಯೋಜನಾವಧಿಯವರೆಗೆ ಹೊಸದಾಗಿ ಸೃಜಿಸಿರುವ 7 ಲೆಕ್ಕಾಧೀಕ್ಷಕರ ಹುದ್ದೆಗಳಿಗೆ ಮಂಡಳಿಗೆ ನಿಯೋಜಿಸಲು ಹಾಗೂ ಸದರಿ ಎಸ್‌ಎಲ್‌ಇಸಿ ಸಭೆಯ ನಿರ್ಣಯದಂತೆ ಹಾಲಿ ಮಂಡಳಿ ನಿರ್ವಹಿಸುತ್ತಿರುವ ಐಹೆಚ್‌ಎಸ್‌ಡಿಪಿ ಮತ್ತು ಬಿಎಸ್‌ಯುಪಿ ಯೋಜನೆಗಳಿಗೆ ಸಂಬಂಧಿಸಿದ ಕಾಮಗಾರಿಗಳ ಬಿಲ್‌ಗಳನ್ನು ಸೂಕ್ತ ಲೆಕ್ಕಪರಿಶೋಧನೆಗೆ ಮಂಡಳಿಗೆ ಲೆಕ್ಕಾಧೀಕ್ಷಕರ ಹುದ್ದೆಯನ್ನು ನಿಯೋಜಿಸಿಕೊಳ್ಳುವುದು ಅನಿವಾರ್ಯವಾಗಿದೆ ಹಾಗೂ ಸದರಿ ಲೆಕ್ಕಾಧೀಕ್ಷಕರ ಸೇವೆಯನ್ನು ಯೋಜನಾವಧಿಯವರೆಗೆ ಉಪಯೋಗಿಸಿಕೊಂಡು ಸದರಿಯವರ ವೇತನವನ್ನು ಸಂಬಂಧಿಸಿದ ಯೋಜನಾ ಸಿಬ್ಬಂದಿ ವೆಚ್ಚದಲ್ಲಿ ಭರಿಸಲಾಗುವುದು. ಆದ್ದರಿಂದ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ರವರ ಅಧಿಕೃತ ಜ್ಞಾಪನ ಆದೇಶದಲ್ಲಿ ನಿಯೋಜಿಸಿರುವ ಶ್ರೀ ಆರ್.ಎಸ್. ಹರವಾಳಕರ್ ಮತ್ತು ಶ್ರೀ ಎನ್. ಮಹದೇವಯ್ಯ ಇಬ್ಬರು ಲೆಕ್ಕಾಧೀಕ್ಷಕರುಗಳನ್ನು ಮಂಡಳಿಯ ಬೆಂಗಳೂರು ಕೇಂದ್ರ ಕಛೇರಿ/ವಿಭಾಗ ಮತ್ತು ದಾವಣಗೆರೆ ವಿಭಾಗಕ್ಕೆ ನಿಯೋಜಿಸಬಹುದಾಗಿದೆ. ಎಂದು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಸರ್ಕಾರ ಈ ಪ್ರಸ್ತಾವನೆಯನ್ನು ಪೂರ್ಣ ಪ್ರಮಾಣದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ವಇ 21 ಕೊಮಂಸೇ 2009, ಬೆಂಗಳೂರು, ದಿನಾಂಕ:1ನೇ ಅಕ್ಟೋಬರ್, 2009**

ಪ್ರಸ್ತಾವನೆಗಳಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ದಿನಾಂಕ:11.5.2009 ರಂದು ನಡೆದ ರಾಜ್ಯ ಮಟ್ಟದ ಅಧಿಕಾರಯುಕ್ತ ಸಮಿತಿ ಸಭೆಯಲ್ಲಿ ಕೈಗೊಳ್ಳಲಾಗಿರುವ ನಿರ್ಣಯದಂತೆ ಕೇಂದ್ರ ಸರ್ಕಾರದ ನರ್ಮ್ IHSDP ಮತ್ತು BSUP ಯೋಜನೆಗಳನ್ನು ಉತ್ತಮ ಗುಣಮಟ್ಟದೊಂದಿಗೆ ಸಮರ್ಪಕವಾಗಿ ಹಾಗೂ ನಿಗದಿತ ಕಾಲಾವಧಿಯೊಳಗೆ ಪೂರ್ಣಗೊಳಿಸಲು ಅನುಕೂಲವಾಗಲು ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ಯೋಜನಾ ಅವಧಿಗೆ ಸೀಮಿತವಾಗಿ (co-terminus with the project) ಎರವಲು ಸೇವೆಯ ಆಧಾರದ ಮೇಲೆ 7 ಲೆಕ್ಕಾಧೀಕ್ಷಕರುಗಳ ಹುದ್ದೆಯನ್ನು ಸೃಜಿಸಲು SLEC (IHSDP) ಸಭೆಯ ನಿರ್ಣಯದಂತೆ ಅನುಮೋದನೆ ನೀಡಿದೆ. ಈ ಹೆಚ್ಚುವರಿ ಹುದ್ದೆಗೆ ತಗಲುವ ವೆಚ್ಚವನ್ನು ಸರ್ಕಾರಕ್ಕೆ ಹೊರೆಯಾಗದಂತೆ, ಯೋಜನೆಗೆ ಸಂಬಂಧಿಸಿದಂತೆ ಕೇಂದ್ರ ಹೊರಡಿಸಿರುವ ಮಾರ್ಗ ಸೂಚಿಯಂತೆ, ನಿಯಮಾನುಸಾರ ಮಂಜೂರಾದ ಯೋಜನಾ ವೆಚ್ಚದಲ್ಲಿ ಭರಿಸತಕ್ಕದ್ದು.

ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿ ಇವರು ಬಿಎಸ್‌ಯುಪಿ/ಐಹೆಚ್‌ಎಸ್‌ಡಿಪಿ ಯೋಜನೆಗಳ ಕಾರ್ಯಕ್ರಮಗಳ ತೀವ್ರ ಹಾಗೂ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಲೆಕ್ಕಾಧೀಕ್ಷಕರುಗಳ ಹುದ್ದೆಯನ್ನು ಸೃಜಿಸುವುದು ಅವಶ್ಯವಿರುವುದನ್ನು ವ್ಯಕ್ತಪಡಿಸಿರುವುದರಿಂದ ಮತ್ತು ಎಸ್‌ಎಲ್‌ಇಸಿ ಸಭೆಯು ಹೊಸದಾಗಿ 7 ಲೆಕ್ಕಾಧೀಕ್ಷಕರುಗಳ ಹುದ್ದೆಯನ್ನು ಸೃಜಿಸುವುದಕ್ಕೆ ಅನುಮೋದನೆ ನೀಡಿರುವ ಹಿನ್ನೆಲೆಯಲ್ಲಿ ಕರ್ನಾಟಕ ಕೊಳಚೆ ನಿರ್ಮೂಲನ ಮಂಡಳಿಗೆ ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ (ಕ್ರ.ಸಂ. (4)&(5)ರ ಅಧಿಕೃತ ಜ್ಞಾಪನದಲ್ಲಿ ನಿಯೋಜಿಸಿರುವ ಶ್ರೀ ಆರ್.ಎಸ್. ಹರವಾಳಕರ್ ಮತ್ತು ಶ್ರೀ ಎನ್. ಮಹದೇವಯ್ಯ ಇಬ್ಬರು ಲೆಕ್ಕಾಧೀಕ್ಷಕರುಗಳನ್ನು ಕ್ರಮವಾಗಿ ಮಂಡಳಿಯ, ಬೆಂಗಳೂರು ವಿಭಾಗ, ಬೆಂಗಳೂರು ಮತ್ತು ದಾವಣಗೆರೆ ವಿಭಾಗಕ್ಕೆ ಯೋಜನೆ ಅವಧಿಗೆ ಸೃಜಿಸಲಾಗಿರುವ ಹುದ್ದೆಗೆ ಎದುರಾಗಿ ನಿಯೋಜನೆ ಮೇಲೆ ನೇಮಿಸಲು ಆದೇಶಿಸಿದೆ.

(ಮಾನ್ಯ ಮುಖ್ಯಮಂತ್ರಿಯಿಂದ ಅನುಮೋದಿಸಲ್ಪಟ್ಟಿದೆ)

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2334

**ಜಿ.ಆರ್. ನಾಗರಾಜ**

ಪೀಠಾಧಿಕಾರಿ–4, ವಸತಿ ಇಲಾಖೆ

## ಶಿಕ್ಷಣ ಸಚಿವಾಲಯ

**ವಿಷಯ :** ದ್ವಿತೀಯ ದರ್ಜೆ ಬೆರಳಚ್ಚುಗಾರರ ಹುದ್ದೆಯನ್ನು ಶೇಕಡ 20ರ ಅನುಪಾತದಂತೆ ಹಿರಿಯ ಬೆರಳಚ್ಚುಗಾರರ ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ :**
1. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ :ಕಾಶಿಇ :04 :ಇಪಿಆರ್ :ಸಿವಿ–4/2009 ದಿನಾಂಕ :26.5.2009.
2. ಸರ್ಕಾರದ ಆದೇಶ ಸಂಖ್ಯೆ :ಇಡಿ 66 ಎಸ್‌ಆರ್‌ಪಿ 81 ದಿನಾಂಕ :17.12.1981.

**ಪ್ರಸ್ತಾವನೆ:**

ಕಾಲೇಜು ಶಿಕ್ಷಣ ಆಯುಕ್ತರು, ಬೆಂಗಳೂರು ಇವರು ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ:26.5.2009ರ ಕಾಲೇಜು ಶಿಕ್ಷಣ ಆಯುಕ್ತರ ಪ್ರಸ್ತಾವನೆಯಲ್ಲಿ ಕಾಲೇಜು ಶಿಕ್ಷಣ ಇಲಾಖೆಯಲ್ಲಿ ಪ್ರಸ್ತುತ ಬೆರಳಚ್ಚುಗಾರರ ಪರಿಷ್ಕೃತ ವೇತನ ಶ್ರೇಣಿ ರೂ. 5800–100–6000–125–6500–150–7100–175–7800–200–8600–225–9500–250–10500 ಮತ್ತು ಹಿರಿಯ ಬೆರಳಚ್ಚುಗಾರರ ಪರಿಷ್ಕೃತ ವೇತನ ಶ್ರೇಣಿ ರೂ. 7275–175–7800–200–8600–225–9500–250–10500–300–12300–350–13350 ಇದೆ. ದಿನಾಂಕ:17.12.1981ರ ಸಂಖ್ಯೆ:ಎಫ್‌ಡಿ 66 ಎಸ್‌ಆರ್‌ಪಿ 81 ರ ಸರ್ಕಾರಿ ಆದೇಶದ ಪ್ರಕಾರ. ಬೆರಳಚ್ಚುಗಾರರ ಹುದ್ದೆಯಲ್ಲಿ ಕನಿಷ್ಠ 10 ವರ್ಷಗಳ ಸೇವೆಯನ್ನು ಸಲ್ಲಿಸಿದ್ದಲ್ಲಿ ಮಾತ್ರ ಅಂತಹವರಿಗೆ ಹಿರಿಯ ಬೆರಳಚ್ಚುಗಾರರ ಹುದ್ದೆಗೆ ಸ್ಥಾನಾಪನ್ನ ಬಡ್ತಿ ನೀಡಲು ಅವಕಾಶವಿರುತ್ತದೆ. ಹೀಗಾಗಿ ಈ ಇಲಾಖೆಯಲ್ಲಿ ಹಿರಿಯ ಬೆರಳಚ್ಚುಗಾರರ ಹುದ್ದೆಗೆ ಬಡ್ತಿ ಪಡೆಯಲು ಈ ಇಲಾಖೆಯಲ್ಲಿ 10 ವರ್ಷಗಳಿಗೂ ಮೇಲ್ಪಟ್ಟು ಸೇವೆ ಪೂರೈಸಿರುವ ಬೆರಳಚ್ಚುಗಾರರು 50ಕ್ಕೂ ಹೆಚ್ಚು ಮಂದಿ ಇದ್ದು, ಇವರುಗಳೆಲ್ಲರೂ ಸಹ ಹಿರಿಯ ಬೆರಳಚ್ಚುಗಾರರ ಹುದ್ದೆಗೆ ನಿಗಧಿಪಡಿಸಿರುವ ಕನಿಷ್ಟ ವೇತನ ರೂ. 7275–00ಕ್ಕಿಂತ ಹೆಚ್ಚು ವೇತನದ ಹಂತವನ್ನು (Basic Pay) ಹೊಂದಿರುತ್ತಾರೆ. ಆದ್ದರಿಂದ ಇವರುಗಳಿಗೆ ಹಿರಿಯ ಬೆರಳಚ್ಚುಗಾರರ ಹುದ್ದೆಗೆ ಬಡ್ತಿ ನೀಡಿದ್ದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮ 42–ಬಿ ಪ್ರಕಾರ ಕೇವಲ ಒಂದು ವಾರ್ಷಿಕ ವೇತನ ಬಡ್ತಿಯ ಸೌಲಭ್ಯ ಪಡೆಯುತ್ತಾರೆ. ಆದ್ದರಿಂದ, ಮೇಲೆ ಕೋರಿರುವಂತೆ 54 ಬೆರಳಚ್ಚುಗಾರರ ಹುದ್ದೆಗಳನ್ನು ಹಿರಿಯ ಬೆರಳಚ್ಚುಗಾರರ ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸಿದಲ್ಲಿ ಹಿರಿಯ ಬೆರಳಚ್ಚುಗಾರರ ವೇತನ ಶ್ರೇಣಿಯಾದ ರೂ. 7275–13350 ರ ಮಧ್ಯಂತರ ವಾರ್ಷಿಕ ವೇತನ ಬಡ್ತಿಯ ದರ ರೂ. 250–00 ಇದಕ್ಕೆ ತಗಲುವ ದಿನಭತ್ಯೆ ರೂ. 81–00 (ಶೇ.32.75) ಮತ್ತು ಮನೆ ಬಾಡಿಗೆ ಭತ್ಯೆ ರೂ. 50–00 (ಶೇಕಡ 20) ಹೀಗೆ ಒಟ್ಟು 250–81–50=381–00ಗಳ ಅಧಿಕ ವೆಚ್ಚ ತಗಲುತ್ತದೆ. ಅಂದರೆ ಒಂದು ಹುದ್ದೆಗೆ ಮಾಸಿಕವಾಗಿ ಅಂದಾಜು ರೂ. 400=00 ರಂತೆ 54 ಹಿರಿಯ ಬೆರಳಚ್ಚುಗಾರರ ಹುದ್ದೆಗಳಿಗೆ ಮಾಸಿಕವಾಗಿ ರೂ.

21,600–00ಗಳ ಅಂದಾಜು ವೆಚ್ಚ ತಗಲುತ್ತದೆ. ಆದ್ದರಿಂದ, ತಗಲುಬಹುದಾದ ವೆಚ್ಚಕ್ಕೆ ಅನುದಾನ ಒದಗಿಸಿಕೊಂಡಂತೆ ಹಿರಿಯ ಬೆರಳಚ್ಚುಗಾರರ ಹುದ್ದೆಗೆ ಮೇಲ್ದರ್ಜೆಗೇರಿಸಲು ಸರ್ಕಾರವನ್ನು ಕೋರಿರುತ್ತಾರೆ.

ಓದಲಾದ (2) ದಿನಾಂಕ: 17.12.1981ರ ಆರ್ಥಿಕ ಇಲಾಖೆ ಹೊರಡಿಸಿರುವ ಸರ್ಕಾರಿ ಆದೇಶದನ್ವಯ ಇಂತಹ ಪ್ರಸ್ತಾವನೆಗಳನ್ನು ಪರಿಶೀಲಿಸಿ ಕ್ರಮವಹಿಸಲು ಆಡಳಿತ ಇಲಾಖೆಯ ಕಾರ್ಯದರ್ಶಿಗಳಿಗೆ ಅಧಿಕಾರ ಪ್ರತ್ಯಾಯೋಜಿಸಲಾಗಿದೆ. ಆದುದರಿಂದ ಸದರಿ ಆದೇಶದಲ್ಲಿನ ಷರತ್ತು ಮತ್ತು ನಿಬಂಧನೆಗೊಳಪಟ್ಟು ಹಾಗೂ ಇಲಾಖೆಯ ಒಟ್ಟಾರೆ ಉಳಿತಾಯದಲ್ಲಿ ಮರು ಹೊಂದಾಣಿಕೆ ಮೂಲಕ ಭರಿಸುವ ಷರತ್ತಿಗೊಳಪಡಿಸಿ ಕಾಲೇಜು ಶಿಕ್ಷಣ ಇಲಾಖೆಗೆ ಮಂಜೂರಾಗಿರುವ ಬೆರಳಚ್ಚುಗಾರರ ಹುದ್ದೆಗಳಲ್ಲಿ ಶೇಕಡ 20ರಷ್ಟು ಹುದ್ದೆಗಳನ್ನು ಹಿರಿಯ ಬೆರಳಚ್ಚುಗಾರರ ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸಲು ತೀರ್ಮಾನಿಸಲಾಗಿದೆ ಆದ್ದರಿಂದ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಇಡಿ 65 ಯುಇಸಿ 2009, ಬೆಂಗಳೂರು, ದಿನಾಂಕ:7ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಆರ್ಥಿಕ ಇಲಾಖೆಯ ಸರ್ಕಾರಿ ಆದೇಶ ಸಂಖ್ಯೆ:ಎಫ್‌ಡಿ 66 ಎಸ್‌ಆರ್‌ಪಿ 81 ದಿನಾಂಕ:17.12.1981ರಲ್ಲಿನ ಷರತ್ತು ಮತ್ತು ನಿಬಂಧನೆಗೊಳಪಟ್ಟು ಮತ್ತು ಇಲಾಖೆಯ ಒಟ್ಟಾರೆ ಉಳಿತಾಯದಲ್ಲಿ ಮರು ಹೊಂದಾಣಿಕೆ ಮೂಲಕ ಭರಿಸುವ ಷರತ್ತಿಗೊಳಪಡಿಸಿ, ಕಾಲೇಜು ಶಿಕ್ಷಣ ಇಲಾಖೆಗೆ ಮಂಜೂರಾದ ಬೆರಳಚ್ಚುಗಾರರ ಹುದ್ದೆಗಳ ಪೈಕಿ 54 (ಐವತ್ನಾಲ್ಕು) ಬೆರಳಚ್ಚುಗಾರರ ಹುದ್ದೆಗಳನ್ನು ಹಿರಿಯ ಬೆರಳಚ್ಚುಗಾರರ ಹುದ್ದೆಗಳನ್ನಾಗಿ ಮೇಲ್ದರ್ಜೆಗೇರಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 926 ವೆಚ್ಚ 8/09 ದಿನಾಂಕ:23.7.2009ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2335

**ಎಸ್.ಎಂ. ನಂದಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ
ಶಿಕ್ಷಣ ಇಲಾಖೆ

**ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ**

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ :ಯೋಇ 309 ಪಿಟಿಪಿ 94, ದಿನಾಂಕ :7.8.1995.

2. ಮುಖ್ಯಮಂತ್ರಿಯವರ ಕಛೇರಿ ಟಿಪ್ಪಣಿ ಪತ್ರ ಸಂ: ಮುಮಂ/ಆ.ಕಾ/459/2009 ದಿನಾಂಕ : 17.6.2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ:7.8.1995 ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಮಂಡ್ಯ ಜಿಲ್ಲೆ ಮದ್ದೂರು ತಾಲ್ಲೂಕಿನ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಯೋಇ 71ಯೋವಿವಿ 2009, ಬೆಂಗಳೂರು, ದಿನಾಂಕ:8ನೇ ಅಕ್ಟೋಬರ್, 2009**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಆರು ಜನರನ್ನು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ.ಸಂ | ತಾಲ್ಲೂಕು | ಹೆಸರು | ವರ್ಗ |
|---|---|---|---|
| 1 | ಮದ್ದೂರು ತಾಲ್ಲೂಕು (ಮಂಡ್ಯ ಜಿಲ್ಲೆ) | 1) ಶ್ರೀ ಎಂ.ಎಸ್. ರುದ್ರಮುನಿ ಸ್ವಾಮಿ ಬಿನ್ ಶಂಭಪ್ಪಯ್ಯ ಮಡೇನಹಳ್ಳಿ ಗ್ರಾಮ, ಸಿ.ಎ. ಕೆರೆ ಹೋಬಳಿ, ಮದ್ದೂರು ತಾಲ್ಲೂಕು | ಸಾಮಾನ್ಯ |

| | | | |
|---|---|---|---|
| | | 2) ಶ್ರೀ ಎಸ್.ಎಂ. ಶಿವರಾಜು ಬಿನ್ ನಿಂಗೇಗೌಡ ಸಬ್ಬನಹಳ್ಳಿ ಹೋಬಳಿ, ಮದ್ದೂರು ತಾಲ್ಲೂಕು | ಬಿ.ಸಿ.ಎಂ |
| | | 3) ಶ್ರೀಮತಿ ಶಾಂತ ಕೋಂ. ಸೋಮಲಿಂಗಪ್ಪ ಚನ್ನಸಂದ್ರ ಗ್ರಾಮ, ಗೊರವನಹಳ್ಳಿ ಅಂಚೆ ಮದ್ದೂರು ತಾ: | ಮಹಿಳೆ |
| | | 4) ಶ್ರೀ ಅಂದಾನಿ ನಾಯಕ ಬಿನ್ ನಂಜನಾಯಕ ಹುರುಗಲುವಾಡಿ ಗ್ರಾಮ, ಕೊಪ್ಪ ಅಂಚೆ ಮತ್ತು ಹೋಬಳಿ, ಮದ್ದೂರು ತಾ | ಎಸ್.ಟಿ |
| | | 5) ಶ್ರೀ ದಿನೇಶ ಬಿನ್ ಮರಿಯಯ್ಯ ಕೊಪ್ಪ ಗ್ರಾಮ, ಅಂಚೆ ಮತ್ತು ಹೋಬಳಿ, ಮದ್ದೂರು ತಾ: | ಪ.ಜಾತಿ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2336

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ 1 & 2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲ್ಲೂಕಿನ ಬೇಲೂರ ಗ್ರಾಮದ ಹತ್ತಿರ ಸಾಸವಿ ಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ವರ್ಕ್‌ಸ್ಲಿಪ್‌ಗೆ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ :** 1. ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರ ದಿನಾಂಕ : 4.8.2009ರ ಪತ್ರ ಸಂಖ್ಯೆ :ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–6/2009–10/4595.

2. ಸರ್ಕಾರದ ದಿನಾಂಕ 2/3/2007ರ ಆದೇಶ ಸಂಖ್ಯೆ :ಸನೀಇ 48 ಅಪಿಬಂ 2007.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ದಿನಾಂಕ:4.8.2009ರ ಪತ್ರದಲ್ಲಿ ಸಣ್ಣ ನೀರಾವರಿ, ಉತ್ತರ ವಲಯದ ಮುಖ್ಯ ಇಂಜಿನಿಯರ್‌ರವರು ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲ್ಲೂಕಿನ ಬೇಲೂರ ಗ್ರಾಮದ ಹತ್ತಿರ ಸಾಸವಿ ಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ವರ್ಕ್‌ಸ್ಲಿಪ್‌ಗೆ ಅನುಮೋದನೆ ನೀಡುವ ಕುರಿತು ಸರ್ಕಾರದ ಅನುಮೋದನೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಉಲ್ಲೇಖ (2) ರಲ್ಲಿರುವ ಸರ್ಕಾರದ ಆದೇಶದಲ್ಲಿ ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲ್ಲೂಕಿನ ಬೇಲೂರ ಗ್ರಾಮದ ಹತ್ತಿರ ಸಾಸವಿ ಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ರೂ. 49.97 ಲಕ್ಷ ಮೊತ್ತದ ಅಂದಾಜು ಪಟ್ಟಿಗೆ ಅನುಮೋದನೆ ನೀಡಲಾಗಿದ್ದು ಮುಖ್ಯ ಅಭಿಯಂತರರು, ಸಣ್ಣ ನೀರಾವರಿ ಉತ್ತರ ವಲಯ, ಬೆಂಗಳೂರು ಇವರು ಕಾಮಗಾರಿಗೆ ತಾಂತ್ರಿಕ ಮಂಜೂರಾತಿ ನೀಡಿ, ಕಾಮಗಾರಿಯನ್ನು ಟೆಂಡರ್ ಮೂಲಕ ಟೆಂಡರ್‌ಗೆ ಇಡಲಾದ ಮೊತ್ತ ರೂ. 49, 14,184/–ಗಳ ಮೇಲೆ ಶೇಕಡ 5.85 ಹೆಚ್ಚುವರಿ ಮೊತ್ತಕ್ಕೆ ಅಂದರೆ ರೂ., 52,01,664/–ಗಳಿಗೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು 3.8.2007ರಂದು ವಹಿಸಿರುತ್ತಾರೆ.

ಕರಾರಿನಂತೆ ಕಾಮಗಾರಿಯನ್ನು ಪ್ರಾರಂಭಿಸಲಾಗಿದ್ದು ತಳಪಾಯದ ಅಗೆತದ ಸಂದರ್ಭದಲ್ಲಿ ಅತಿ ಹೆಚ್ಚಿನ ನೀರಿನ ಬಸಿಯುವಿಕೆಯಿಂದಾಗಿ ನಿರ್ಜಲೀಕರಣ ಕೈಗೊಂಡರೂ ಸಹ ಕಾಂಕ್ರೀಟ್ ಕೆಲಸವನ್ನು ಕೈಗೊಳ್ಳಲು ಸಾಧ್ಯವಾಗದೇ ಕಾಮಗಾರಿಯು ಸ್ಥಗಿತಗೊಳಿಸಲಾಗಿತ್ತು. ಇದೇ ಸಂದರ್ಭದಲ್ಲಿ ಅಂದರೆ ಮೇ–2008ರಲ್ಲಿ ಅನಿರೀಕ್ಷಿತವಾಗಿ ಬಿದ್ದ ಭಾರೀ ಮಳೆಯಿಂದಾಗಿ ಈಗಾಗಲೇ ಕೈಗೊಂಡಿದ್ದ ಅಗೆತದ ಭಾಗದಲ್ಲಿ ಮರಳು ತುಂಬಿದ್ದರಿಂದ ಪುನಃ ಈ ಕಾಮಗಾರಿಯನ್ನು ಜೂನ್–2008ರಲ್ಲಿ ಪ್ರಾರಂಭಿಸಿ ನಿರ್ಜಲೀಕರಣಕ್ಕೆ ಸೂಕ್ತ ವ್ಯವಸ್ಥೆಯನ್ನು ಮಾಡಿಕೊಂಡು ಕಾಮಗಾರಿಯನ್ನು ಪೂರ್ಣಗೊಳಿಸಲಾಗಿರುತ್ತದೆ.

ಕಾಮಗಾರಿಯು ಪ್ರಗತಿಯಲ್ಲಿದ್ದಾಗ ದಿನಾಂಕ:1.2.2009 ರಂದು ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಬೆಳಗಾಂ ಇವರು ಪರಿವೀಕ್ಷಣೆ ಮಾಡಿದ್ದು, ಈ ಸಂದರ್ಭದಲ್ಲಿ ಮಳೆಗಾಲದಲ್ಲಿ ನೀರಿನ ಹರಿವು ಹೆಚ್ಚಾಗಿ ಬ್ಯಾರೇಜಿನ ಬದಿಗಳು ಕೊಚ್ಚಿಹೋಗಿರುವುದು ಹಾಗೂ ಬದಿಗಳು ಉಸುಕು ಮಿಶ್ರಿತ ಮಣ್ಣಿನಿಂದ ಕೂಡಿರುವುದರಿಂದ, ಎರಡೂ ಬದಿಯ ಕೀ ವಾಲ್

ಗಳನ್ನು 6 ಮೀ. ಉದ್ದದವರೆಗೆ ಹೆಚ್ಚಿಸಿ ಕಾಮಗಾರಿಯ ಸುರಕ್ಷತೆ ಹಾಗೂ ಭದ್ರತೆಯ ಸಲುವಾಗಿ ಹೆಚ್ಚಿನ ಕೆಲಸ ನಿರ್ವಹಿಸಲು ಪರಿವೀಕ್ಷಣಾ ವರದಿಯಲ್ಲಿ ಸೂಚನೆ ನೀಡಲಾಗಿತ್ತು. ಅದರಂತೆ ಕಾಮಗಾರಿಯನ್ನು ನಿರ್ವಹಿಸಲಾಗಿದೆ.

ಕಾಮಗಾರಿಯಲ್ಲಿ ನಿರ್ವಹಿಸಲಾದ ಹೆಚ್ಚುವರಿ ಕೆಲಸ ಮತ್ತು ಪರಿಮಾಣಗಳೊಂದಿಗೆ ರೂ. 12,42,032–00ಗಳ ಮೊತ್ತಕ್ಕೆ ವರ್ಕ್‌ಸ್ಲಿಪ್ ತಯಾರಿಸಿದ್ದು ಈ ವರ್ಕ್‌ಸ್ಲಿಪ್‌ಗೆ ಸರ್ಕಾರದ ಅನುಮೋದನೆಯನ್ನು ಕೋರಿ ಮುಖ್ಯ ಇಂಜಿನಿಯರ್ ರವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:ಸನೀಇ 55 ಅಪಿಬಂ 2009, ಬೆಂಗಳೂರು, ದಿನಾಂಕ:6ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಾಗಲಕೋಟೆ ಜಿಲ್ಲೆ ಬಾದಾಮಿ ತಾಲ್ಲೂಕಿನ ಬೇಲೂರ ಗ್ರಾಮದ ಹತ್ತಿರ ಸಾಸವಿ ಹಳ್ಳಕ್ಕೆ ಅಡ್ಡಲಾಗಿ ಬ್ಯಾರೇಜ್ ನಿರ್ಮಾಣ ಕಾಮಗಾರಿಯಲ್ಲಿ ನಿರ್ವಹಿಸಲಾದ ಹೆಚ್ಚುವರಿ ಕೆಲಸದ ರೂ. 12,42,032–00ಗಳ ಮೊತ್ತದ (ರೂಪಾಯಿ ಹನ್ನೆರಡು ಲಕ್ಷ ನಲವತ್ತೆರಡು ಸಾವಿರದ ಮೂವತ್ತೆರಡು ಮಾತ್ರ) ವರ್ಕ್‌ಸ್ಲಿಪ್‌ಗೆ ಸರ್ಕಾರವು ಅನುಮೋದನೆ ನೀಡಿದೆ.

ಈ ಆದೇಶವನ್ನು ದಿನಾಂಕ:11.12.2006ರ ಆರ್ಥಿಕ ಇಲಾಖೆಯ ಆದೇಶ ಸಂ:ಎಫ್.ಡಿ. 01 ಟಿಎಫ್ ಪಿ 2002 ದಿನಾಂಕ:20.1.2003ರ ಮೇರೆಗೆ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಆರ್ಥಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2338

**ಕೆ. ಸುಧಾಕರಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಸೇರ್ಪಡೆ ಆದೇಶ**

**ಸಂಖ್ಯೆ:ಸನೀಇ 8 ಏನೀಯೋ 2009, ಬೆಂಗಳೂರು, ದಿನಾಂಕ:8ನೇ ಅಕ್ಟೋಬರ್, 2009**

ಸರ್ಕಾರದ ಆದೇಶ ಸಂಖ್ಯೆ:ಸನೀಇ 8 ಏನಿಯೋ 2009, ದಿನಾಂಕ:23.9.09ರ ಆದೇಶ ಭಾಗದಲ್ಲಿಯ ಷರತ್ತುಗಳನ್ನು ಈ ಕೆಳಕಂಡಂತೆ ಸೇರಿಸಿ ಓದಿಕೊಳ್ಳತಕ್ಕದ್ದು.

ಅ) ಕೆರೆಯನ್ನು ಮೇಲ್ಕಂಡ ಉದ್ದೇಶಕ್ಕಾಗಿ ಬಳಸಿಕೊಳ್ಳುವ ಬಗ್ಗೆ ನೀರಾವರಿ ಸಲಹಾ ಸಮಿತಿ/ನೀರು ಬಳಕೆದಾರರ ಸಂಘದ ಸಭೆಯಲ್ಲಿ ಗೊತ್ತುವಳಿಯನ್ನು ಅಂಗೀಕರಿಸುವುದು.

ಆ) ಹಾಲಿ ಇರುವ ಕೆರೆಯ ಅಚ್ಚುಕಟ್ಟುದಾರರಿಗೆ ಯಾವುದೇ ತೊಂದರೆಯಾಗದಂತೆ ನೋಡಿಕೊಳ್ಳುವುದು ;

ಇ) ಕೆರೆಯ ಅಭಿವೃದ್ಧಿ ಕಾಮಗಾರಿಗಳನ್ನು ನಿರ್ವಹಿಸುವಾಗ ಕೆರೆಯ ಏರಿ, ತೂಬು, ಕೋಡಿಯ ಸ್ಥಿರತೆಗೆ ಹಾಗೂ ಸಧೃಡತೆಗೆ ಧಕ್ಕೆಯಾಗದಂತೆ ಕಾರ್ಯನಿರ್ವಹಿಸುವುದು

ಈ) ಕೆರೆಯನ್ನು ಯಾವುದೇ ಆರ್ಥಿಕ ಲಾಭಕ್ಕೆ ಬಳಸಿಕೊಳ್ಳಬಾರದು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2339

**ಕೆ. ಸುಧಾಕರಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ :** ಕರ್ನಾಟಕ ಸರ್ಕಾರ ಸಚಿವಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ತಾತ್ಕಾಲಿಕವಾಗಿ ಮುಂದುವರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ :ಸಿಆಸುಇ 17 ಸಸಿವಿ 97 (ಭಾ), ದಿನಾಂಕ :17.4.1998.
2. ಸರ್ಕಾರದ ಆದೇಶ ಸಂಖ್ಯೆ :ಸಿಆಸುಇ 07 ಸಸಿವಿ 2007, ದಿನಾಂಕ :3.6.2008
3. ಸರ್ಕಾರದ ಆದೇಶ ಸಂಖ್ಯೆ :ಸಿಆಸುಇ 133 ಸಅಸೇ 2009, ದಿನಾಂಕ :13.3.2009.
4. ಆರೋಗ್ಯ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ :ಆಕುಕ 218 ಎಂಎಂಸಿ 2009, ದಿನಾಂಕ :14.8.2009.

**ಪ್ರಸ್ತಾವನೆ:**

ಮೇಲೆ ಕ್ರಮಸಂಖ್ಯೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:12.3.1998 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಸೃಜಿಸಲಾಗಿದೆ ಹಾಗೂ ಕಾಲಕಾಲಕ್ಕೆ ಮುಂದುವರಿಸಲಾಗಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಹಿರಿಯ ಸಹಾಯಕ/ಭಾಷಾಂತರಕಾರ | 1 ಹುದ್ದೆ |
| 2 | ಶೀಘ್ರಲಿಪಿಗಾರರು | 2 ಹುದ್ದೆಗಳು |
| 3 | ಕಿರಿಯ ಸಹಾಯಕರು | 1 ಹುದ್ದೆ |
| 4 | ದಲಾಯತ್ | 2 ಹುದ್ದೆಗಳು |
| 5 | ವಾಹನ ಚಾಲಕ | 1 ಹುದ್ದೆ |

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಈ ಹುದ್ದೆಗಳನ್ನು ದಿನಾಂಕ:1.4.2008 ರಿಂದ 31.3.2009ರವರೆಗೆ ಮುಂದುವರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸರ್ಕಾರದ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆಯನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ವೃಂದಕ್ಕೆ ಉನ್ನತೀಕರಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಹುದ್ದೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ದಿನಾಂಕ:1.4.2009ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸುವಂತೆ ಕೋರಲಾಗಿದೆ. ಅದರಂತೆ ಸರ್ಕಾರವು ಪರಿಶೀಲಿಸಿ ಈ ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 453 ಸಅಸೇ 2009, ಬೆಂಗಳೂರು, ದಿನಾಂಕ:6ನೇ ಅಕ್ಟೋಬರ್, 2009**

ಕರ್ನಾಟಕ ಸರ್ಕಾರದ ಸಚಿವಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಸರ್ಕಾರದ ಪ್ರಧಾನ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆ ಹಾಗೂ ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ:1.4.2009 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಿ ಆದೇಶಿಸಿದೆ.

| ಕ್ರ. ಸಂ. | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಹಿರಿಯ ಸಹಾಯಕ/ಭಾಷಾಂತರಕಾರ | 1 ಹುದ್ದೆ |
| 2 | ಶೀಘ್ರಲಿಪಿಗಾರರು | 2 ಹುದ್ದೆಗಳು |
| 3 | ಕಿರಿಯ ಸಹಾಯಕರು | 1 ಹುದ್ದೆ |
| 4 | ದಲಾಯತ್ | 2 ಹುದ್ದೆಗಳು |
| 5 | ವಾಹನ ಚಾಲಕ | 1 ಹುದ್ದೆ |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ:10.7.1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದ ಅನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2340

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

**ಇಂಧನ ಸಚಿವಾಲಯ**

**ಸೇರ್ಪಡೆ**

**ಸಂಖ್ಯೆ:ಇಎನ್ 303 ಎನ್‌ಸಿಇ 2007, ಬೆಂಗಳೂರು, ದಿನಾಂಕ:5ನೇ ಅಕ್ಟೋಬರ್, 2009**

ಸರ್ಕಾರಿ ಆದೇಶ ಸಂಖ್ಯೆ:ಇಎನ್ 303 ಎನ್‌ಸಿಇ 2007 ದಿನಾಂಕ:25.6.2009ರ ಆದೇಶ ಭಾಗದ ಮೊದಲನೆ ಕಂಡಿಕೆಯಲ್ಲಿ ಈ ಕೆಳಗಿನಂತೆ ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

Longitude:$74^0$46’ to $74^0$48’ & Latitude:$14^0$125to $14^0$28’

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2342

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** 9ನೇ ರಾಜ್ಯ ಮಟ್ಟದ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಅಭಿಯೋಜಕರ ಸಮ್ಮೇಳನವನ್ನು ನಡೆಸಲು ಅನುದಾನ ಮತ್ತು ಅನುಮತಿ ಕೋರಿರುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರ ಪತ್ರ ಸಂಖ್ಯೆ : ಡಿಪಿಎನ್ :ಲೆಕ್ಕ–1 :100–2009–10 ;ದಿನಾಂಕ :19.8.2009.

**ಪ್ರಸ್ತಾವನೆ:**

ದಿನಾಂಕ:10.10.2009ಮತ್ತು 11.10.2009 ರಂದು ಬೆಂಗಳೂರಿನಲ್ಲಿ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಅಭಿಯೋಜಕರುಗಳ ರಾಜ್ಯ ಮಟ್ಟದ ಸಮ್ಮೇಳನವನ್ನು ಆಯೋಜಿಸಲು ಉದ್ದೇಶಿಸಿರುವುದಾಗಿ ಸದರಿ ಸಮ್ಮೇಳನಕ್ಕೆ ಈ ಇಲಾಖೆಯ ಎಲ್ಲಾ ಅಭಿಯೋಜಕರುಗಳು ಹಾಜರಾಗಬೇಕಾಗಿದ್ದು, ಸದರಿ ಸಮ್ಮೇಳನ ನಡೆಸಲು ರೂ. 5.00 ಲಕ್ಷ ಅನುದಾನವನ್ನು ಬಿಡುಗಡೆ ಮಾಡಬೇಕೆಂದು, ಹಾಗೂ ಸಮ್ಮೇಳನ ನಡೆಯುವ ದಿನಾಂಕ:10.10.2009 ಮತ್ತು 11.10.2009 ಸಾರ್ವತ್ರಿಕ ರಜೆ ದಿನಗಳು ಆಗಿರುವುದರಿಂದ ಸಮ್ಮೇಳನಕ್ಕೆ ಹಾಜರಾಗುವ ಅಧಿಕಾರಿಗಳಿಗೆ ಸದರಿ ದಿನಗಳಂದು ಕೇಂದ್ರ ಸ್ಥಾನ ಬಿಟ್ಟಿರಲು ಹಾಗೂ ಅನ್ಯ ಕರ್ತವ್ಯದ ಅವಧಿ ಎಂದು ಪರಿಗಣಿಸಲು ಹಾಗೂ ಅವರುಗಳಿಗೆ ನಿಯಮಗಳ ಪ್ರಕಾರ ಪ್ರಯಾಣ ಭತ್ಯೆಯನ್ನು ಪಾವತಿಸಲು ಅನುಮತಿಯನ್ನು ನೀಡುವಂತೆ ಕಾರ್ಯದರ್ಶಿ, ಕರ್ನಾಟಕ ರಾಜ್ಯ ಅಭಿಯೋಜನಾ ಅಧಿಕಾರಿಗಳ ಸಂಘ, ಬೆಂಗಳೂರು ಇವರು ಕೋರಿರುವುದಾಗಿ ನಿರ್ದೇಶಕರು ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ ಓದಲಾದ ಪತ್ರ ದಿನಾಂಕ:19.8.2009ರಲ್ಲಿ ವರದಿಸಿದ್ದಾರೆ. ಮುಂದುವರೆದು 2009–10ನೇ ಸಾಲಿನ 2014–00–114–0–02–101 ಸಹಾಯಾನುದಾನ ಲೆಕ್ಕ ಶೀರ್ಷಿಕೆಯಲ್ಲಿ ರೂ. 5.00 ಲಕ್ಷ ಅನುದಾನವನ್ನು ಸಮ್ಮೇಳನ ನಡೆಸಲು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಒಇ 310 ಪಿಪಿಇ 2009, ಬೆಂಗಳೂರು, ದಿನಾಂಕ:8ನೇ ಅಕ್ಟೋಬರ್, 2009**

ದಿನಾಂಕ:10.10.2009 ಮತ್ತು 11.10.2009 (2ನೇ ಶನಿವಾರ ಮತ್ತು ಭಾನುವಾರ)ರಂದು ಬೆಂಗಳೂರಿನಲ್ಲಿ ನಡೆಯುವ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಅಭಿಯೋಜಕರುಗಳ ರಾಜ್ಯ ಮಟ್ಟದ ಸಮ್ಮೇಳನ ನಡೆಸಲು 2009–10ನೇ ಸಾಲಿನ 2014–00–114–0–02–101 ಸಹಾಯಾನುದಾನ ಲೆಕ್ಕ ಶೀರ್ಷಿಕೆಯಲ್ಲಿ ರೂ. 5.00 ಲಕ್ಷ (ಐದು ಲಕ್ಷ ರೂಪಾಯಿಗಳು ಮಾತ್ರ) ಅನುದಾನವನ್ನು ಬಿಡುಗಡೆ ಮಾಡಲು ಹಾಗೂ ಭಾಗವಹಿಸುವ ಅಭಿಯೋಜನಾಧಿಕಾರಿಗಳಿಗೆ ಬೆಂಗಳೂರು ನಗರ ಜಿಲ್ಲೆ ಅಧಿಕಾರಿಗಳನ್ನು ಹೊರತುಪಡಿಸಿ, ಕಾರ್ಯಕೇಂದ್ರದಿಂದ ಸಮ್ಮೇಳನ ನಡೆಯಲಿರುವ ಬೆಂಗಳೂರಿಗೆ ಪ್ರಯಾಣ ಮಾಡಲು ತಗಲುವ ಕನಿಷ್ಠ ಪ್ರಯಾಣದ ಅವಧಿಯನ್ನು ಬಳಸಿಕೊಂಡಿದ್ದಕ್ಕೆ ಮತ್ತು ಕೇಂದ್ರ ಸ್ಥಾನವನ್ನು ಬಿಟ್ಟಿದ್ದಕ್ಕೆ ಅನ್ಯ ಕರ್ತವ್ಯದ ಅವಧಿ ಎಂದು ಪರಿಗಣಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಆಇ 706 ವೆಚ್ಚ–11–2009 ದಿನಾಂಕ:16.9.2009 ಮತ್ತು ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ 1 ಟಿಎಫ್ ಪಿ 96, ದಿನಾಂಕ:10.7.1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2347

**ಕೆ.ಸಿ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಒಳಾಡಳಿತ ಇಲಾಖೆ

(ಕಾ ಮತ್ತು ಸು ಹಾಗೂ ಕಾಪೀಪೋಸಾ ಮತ್ತು ಅಭಿಯೋಗ)

## ಇಂಧನ ಸಚಿವಾಲಯ

**ಸೇರ್ಪಡೆ ಸಂಖ್ಯೆ:ಇಎನ್ 308 ಎನ್‌ಸಿಇ 2007, ಬೆಂಗಳೂರು, ದಿನಾಂಕ:5ನೇ ಅಕ್ಟೋಬರ್, 2009**

ಸರ್ಕಾರಿ ಆದೇಶ ಸಂಖ್ಯೆ:ಇಎನ್ 308 ಎನ್‌ಸಿಇ 2007 ದಿನಾಂಕ:19.5.2009ರ ಆದೇಶ ಭಾಗದ ಮೊದಲನೆ ಕಂಡಿಕೆಯಲ್ಲಿ ಈ ಕೆಳಗಿನಂತೆ ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

"Longitude:$74^0$ 21'50" to $74^0$22'30" & Latitude:$15^0$42'20'' to $15^0$43'00"

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2343

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**ಸೇರ್ಪಡೆ**

**ಸಂಖ್ಯೆ:ಇಎನ್ 320 ಎನ್‌ಸಿಇ 2007, ಬೆಂಗಳೂರು, ದಿನಾಂಕ:5ನೇ ಅಕ್ಟೋಬರ್, 2009**

ಸರ್ಕಾರಿ ಆದೇಶ ಸಂಖ್ಯೆ:ಇಎನ್ 320 ಎನ್‌ಸಿಇ 2007 ದಿನಾಂಕ:25.6.2009ರ ಆದೇಶ ಭಾಗದ ಮೊದಲನೆ ಕಂಡಿಕೆಯಲ್ಲಿ ಈ ಕೆಳಗಿನಂತೆ ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

"Longitude:$74^0$46' to $74^0$48' & Latitude:$14^0$54 to $14^0$56'

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2344 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**ಸೇರ್ಪಡೆ**

**ಸಂಖ್ಯೆ:ಇಎನ್ 305 ಎನ್‌ಸಿಇ 2007, ಬೆಂಗಳೂರು, ದಿನಾಂಕ:5ನೇ ಅಕ್ಟೋಬರ್, 2009**

ಸರ್ಕಾರಿ ಆದೇಶ ಸಂಖ್ಯೆ:ಇಎನ್ 305 ಎನ್‌ಸಿಇ 2007 ದಿನಾಂಕ:25.6.2009ರ ಆದೇಶ ಭಾಗದ ಮೊದಲನೆ ಕಂಡಿಕೆಯಲ್ಲಿ ಈ ಕೆಳಗಿನಂತೆ ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

"Longitude:$74^0$46" to $74^0$49' & Latitude:$14^0$52' to $14^0$54'

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2345 **ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ

**ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ :** ಶ್ರೀ ಹೆಚ್.ವಿ. ಶೇಷಾದ್ರಿ ಅಯ್ಯರ್, ನೋಟರಿ, ರಾಮನಗರ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸಿ ಅವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆಯುವ ಬಗ್ಗೆ.

**ಓದಲಾಗಿದೆ :** 1. ಶ್ರೀ ಹೆಚ್.ವಿ. ಶೇಷಾದ್ರಿ ಆಯ್ಯರ್, ವಕೀಲರು, ರಾಮನಗರ ಇವರ ಮನವಿ ದಿನಾಂಕ :ಇಲ್ಲ.

2. ಅಧಿಸೂಚನೆ ಸಂಖ್ಯೆ ಲಾ 159 ಎಲ್ ಎಜಿ 2008 ದಿನಾಂಕ :7.10.2009

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಶ್ರೀ ಹೆಚ್.ವಿ. ಶೇಷಾದ್ರಿ ಅಯ್ಯರ್, ವಕೀಲರು, ರವರು ಕಾನೂನು ಇಲಾಖೆಯ ಕಾರ್ಯದರ್ಶಿಯವರಿಗೆ ದಿನಾಂಕ:28.8.2009ರಂದು ಮನವಿ ಸಲ್ಲಿಸಿ ಜಿಲ್ಲಾ ಸರ್ಕಾರಿ ವಕೀಲರ ನೇಮಕಾತಿಗೆ ಕರೆದಿರುವ ಅಧಿಸೂಚನೆಯನ್ವಯ ಅವರು ಸಹಾ ಅರ್ಹ ಅಭ್ಯರ್ಥಿಯಾಗಿ ಅರ್ಜಿ ಸಲ್ಲಿಸಿದ್ದು, ಪ್ರಸ್ತುತ ನೋಟರಿಯಾಗಿ ಕರ್ತವ್ಯ ನಿರ್ವಹಿಸುತ್ತಿರುವುದರಿಂದ, ಕರ್ನಾಟಕ ಕಾನೂನು ಅಧಿಕಾರಿಗಳ ನೇಮಕಾತಿ ಮತ್ತು (ಸೇವಾ ಷರತ್ತು) ನಿಯಮಗಳು 1977ರ ನಿಯಮ 12ರನ್ವಯ ಎರಡು ಹುದ್ದೆಗಳನ್ನು ಹೊಂದಲು ಅವಕಾಶವಿಲ್ಲವಾದ್ದರಿಂದ ಜಿಲ್ಲಾ ಸರ್ಕಾರಿ ವಕೀಲರಾಗಿ ನೇಮಕಗೊಂಡರೆ ನೋಟರಿ ಸ್ಥಾನಕ್ಕೆ ರಾಜೀನಾಮೆ ನೀಡುವುದಾಗಿ ಘೋಷಿಸಿ ದೃಢೀಕರಿಸಿರುತ್ತಾರೆ. ಶ್ರೀಯುತರು ಪ್ರಸ್ತುತ ಉಲ್ಲೇಖಿತ (2)ರ ಅಧಿಸೂಚನೆಯಲ್ಲಿ ಜಿಲ್ಲಾ ಸರ್ಕಾರಿ ವಕೀಲರಾಗಿ ನೇಮಕ ಹೊಂದಿರುವುದರಿಂದ ನೋಟರಿಯವರ ಮನವಿಯನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಲಾ 122 ಎಲ್‌ಸಿಎಲ್ 2009, ಬೆಂಗಳೂರು, ದಿನಾಂಕ: 7ನೇ ಅಕ್ಟೋಬರ್,2009**

ಶ್ರೀ ಹೆಚ್.ವಿ. ಶೇಷಾದ್ರಿ ಅಯ್ಯರ್, ನೋಟರಿ, ರಾಮನಗರ ಇವರ ರಾಜೀನಾಮೆಯನ್ನು ಜಿಲ್ಲಾ ಸರ್ಕಾರಿ ವಕೀಲರ ಹುದ್ದೆಗೆ ನೇಮಕಾತಿಗೊಂಡ ದಿನಾಂಕದಿಂದ ಜಾರಿಗೊಂಡಂತೆ ಅಂಗೀಕರಿಸಿ ಅವರ ಹೆಸರನ್ನು ನೋಟರಿ ಕಾಯ್ದೆ 1952ರ ಕಲಂ 10(a)ರನ್ವಯ ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2348 **ಶಕುಂತಲಾ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**HEALTH AND FAMILY WELFARE SECRETARIAT**

**Sub :** Continuation of Auditors for conducting of Audit of Working Accounts (Disposition Fund) of Secondary Level Health Care Facilities in Gulbarga –KfW Project-reg.

**Read :** 1. Govt Order No. HFW/KHSDRP/Sect/KfW-1/2007 Bangalore, dt. 12.12.2008.

2. Proceedings of the 15th meeting of the Programme Steering Committee dt:14.7.2009.

**Preamble:**

In the Government Order read at (1) above, sanction was accorded for appointment of services of Chartered Accountants as auditors for conducting Audit of Working Accounts (Disposition Fund) of Secondary Level Health Care Facilities in Gulbarga Division on KfW Project to M/s V.R. Murali & Co. for the period from 1.4.2008 to 31.3.2009 on a fee of Rs. 1,20,000/- plus service tax plus travelling expenses for visit to outstations. Due to extension of some works under KfW Phase-II, Project period has also been extended.

The Project's Programme Steering Committee in its 15th meeting on 14th July 2009, has approved the continuation of M/s V.R.Murali & Co., as auditors on the same terms and conditions i.e., an audit fee of Rs. 1,20, 000/- plus service tax plus travelling expenses/out-of-pocket expenses for outstation visits for a period of one year i.e., from April 2009 to March 2010.

Hence, the following order.

**Government Order No.HFW/KHSDRP/Sect/KfW-II/1/2007, Bangalore, Dated:8th October, 2009**

Under the circumstances mentioned in the preamble, Government are hereby pleased to approve continuation of M/s V.R. Murali and Co., as Auditor, for conducting audit of working accounts (Disposition Fund) of Secondary Level Health Care Facilities in Gulbarga Division, KfW Project Phase-II for the period between April 2009 to March 2010 on a fee of Rs .1,20,000+ service tax+travelling expenses/out of pocket expenses for outstation visits. Travelling and out-of-pocket expenses for outstation visits shall be governed by the existing Terms of Reference,.The Firm shall enter into an agreement with the Project in this regard.

The expenditure in this behalf shall be debited to the Disposition Fund of KfW Project Phase-II.

By order and in the name of Governor of Karnataka

P.R. 2350

**M. SHASHIDHAR**

Deputy Secretary to Govt. KHSDRP

Health and Family Welfare Department

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ :** ಅಂಗವಿಕಲರ ಕಲ್ಯಾಣ ಇಲಾಖೆಯ ಆರ್ಥಿಕ ಸಹಾಯದೊಂದಿಗೆ ನಡೆಸಲಾಗುತ್ತಿರುವ ವಿದ್ಯಾರ್ಥಿಗಳ ತರಬೇತಿ ವಸತಿ ನಿಲಯಗಳ ತಪಾಸಣೆ ಕುರಿತು–ಶ್ರೀ ಎಂ.ಎನ್. ನಾಯಕ್, ಹಿಂದಿನ ಜಿಲ್ಲಾ ಅಂಗವಿಕಲರ ಕಲ್ಯಾಣಧಿಕಾರಿ, ರಾಯಚೂರು ಪ್ರಸ್ತುತ ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಶಿರಹಟ್ಟಿ ಇವರ ವಿರುದ್ದ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ :** 1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ರಾಯಚೂರು ಇವರ ಪತ್ರ ಸಂಖ್ಯೆ :ಜಿ.ಪಂ.ರಾ/13/ಸಿಸಿಎ/2007/2820ದಿ 12.10.2007.

2. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಆದೇಶ ಸಂಖ್ಯೆ :ನಿಸಶಿಪ 15/07–08 ದಿ :6.10.2007.

3. ಸರ್ಕಾರದ ಆದೇಶ ಸಂಖ್ಯೆ :ಮಮಇ 545 ಎಸ್‌ಜೆಡಿ 2007 ದಿ :23.11.2007

4. ಸರ್ಕಾರದಕಾರಣ ಕೇಳುವ ನೋಟೀಸ್ ಸಂಖ್ಯೆ :ಮಮಇ 545 ಎಸ್‌ಜೆಡಿ 2007 ದಿ:30.1.2008.

5. ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಶ್ರೀ ವೈ.ಬಿ. ಶಿಂಧೆ, ಹಿಂದಿನ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು, ಹಾಲಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ, ಕೊಪ್ಪಳ ಜಿಲ್ಲೆ ಇವರು ದಿ :16.2.2008 ರಂದು ಸಲ್ಲಿಸಿರುವ ಲಿಖಿತ ಹೇಳಿಕೆ.
6. ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಶ್ರೀ ಎಂ.ಎನ್. ನಾಯಕ್, ಹಿಂದಿನ ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿ, ರಾಯಚೂರು, ಇವರು ದಿ :21.2.2008 ರಂದು ಸಲ್ಲಿಸಿರುವ ಲಿಖಿತ ಹೇಳಿಕೆ.
7. ಸರ್ಕಾರದ ಆದೇಶ ಸಂಖ್ಯೆ : ಮಮಇ 545 ಎಸ್‌ಜೆಡಿ 2007 ದಿ :17.3.2008
8. ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಆದೇಶ ಸಂಖ್ಯೆ :ನಿಸಿಶಿಪ/20/06–07 ದಿ :20.3.2008.
9. ವಿಚಾರಣಾಧಿಕಾರಿಯಾದ ಶ್ರೀ ಕುಮಾರಗೌಡ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬಳ್ಳಾರಿ ಇವರ ಪತ್ರ ದಿ :12.1.2009.
10. ಸರ್ಕಾರದ ಆದೇಶ ಸಂಖ್ಯೆ :ಮಮಇ 383 ಎಸ್ ಜೆಡಿ 2009, ದಿ :24.9.2009.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ:12.10.2007 ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾಪಂಚಾಯತ್, ರಾಯಚೂರು ಜಿಲ್ಲೆ, ಇವರು ಪ್ರಸ್ತಾವನೆ ಸಲ್ಲಿಸಿ, ರಾಯಚೂರು ಜಿಲ್ಲಾ ಪಂಚಾಯತ್‌ನ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯಾದ ಶ್ರೀ ಎ. ಅನೀಸ್‌ರಾಜ್ ರವರು ದಿ:6.7.2007 ರಂದು ಸುಮಾರು ಬೆಳಿಗ್ಗೆ 10.00 ರಿಂದ 11.00 ಗಂಟೆಯ ವೇಳೆಯಲ್ಲಿ ರಾಯಚೂರು ಜಿಲ್ಲೆಯ ಶ್ರೀ ರೇವಣಸಿದ್ದೇಶ್ವರ ಸಂಸ್ಥೆ, ಬೀದರ್ ಶಾಖಾವತಿಯಿಂದ ಬೋಳಮಾನ ದೊಡ್ಡಿ ರಸ್ತೆಯಲ್ಲಿ ಖಾಸಗಿ ಮನೆಯೊಂದರಲ್ಲಿ ನಡೆಸುತ್ತಿರುವ ವಿದ್ಯಾರ್ಥಿನಿಲಯ ಹಾಗೂ ಸಂಕಲ್ಪ ಸಂಸ್ಥೆ, ರಾಯಚೂರು ಇವರಿಂದ ನಡೆಸಲ್ಪಡುತ್ತಿರುವ ಪ್ರಗತಿ ಪುರುಷ ಅಂಗವಿಕಲ ಶಿಕ್ಷಣಾರ್ಥಿಗಳ ವಸತಿ ನಿಲಯಕ್ಕೆ ಭೇಟಿ ನೀಡಿದಾಗ ಕೇವಲ 16 ಶಿಕ್ಷಣಾರ್ಥಿಗಳು ಮಾತ್ರ ಹಾಜರಿದ್ದು, ಒಂದು ಕೋಣೆಯಲ್ಲಿ 3–4 ಹಳೆಯ ನಿಷ್ಪ್ರಯೋಜಕ ಗಣಕ ಯಂತ್ರಗಳನ್ನು, ಇಡಲಾಗಿದ್ದು, ಅದೇ ರೀತಿಯಾಗಿ ಐ.ಬಿ, ಕಾಲೋನಿಯಲ್ಲಿ ಸಂಕಲ್ಪ ಸಂಸ್ಥೆ ರಾಯಚೂರು ರವರಿಂದ ನಡೆಸಲ್ಪಡುತ್ತಿರುವ ಅಂಗವಿಕಲ ಮಹಿಳೆಯರ ವಸತಿ ಶಾಲೆಯೊಂದರಲ್ಲಿಯೂ ಸಹ ನೋಂದಾಯಿತ 24 ಶಿಕ್ಷಣಾರ್ಥಿಗಳ ಪೈಕಿ ಕೇವಲ 6 ಅಭ್ಯರ್ಥಿಗಳಿದ್ದು, 3 ಹಳೆಯ ಗಣಕ ಯಂತ್ರಗಳನ್ನು ಇಟ್ಟಿದ್ದು, ಪರಿಶೀಲನಾ ಸಮಯದಲ್ಲಿ ಶ್ರೀ ವೈ.ಬಿ. ಶಿಂಧೆ, ಸಹಾಯಕ ನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು ಮತ್ತು ಶ್ರೀ ಎಂ.ಎನ್. ನಾಯಕ್ ಜಿಲ್ಲಾ ಅಂಗವಿಕಲ ಹಾಗೂ ಹಿರಿಯ ನಾಗರಿಕರ ಕಲ್ಯಾಣಾಧಿಕಾರಿ, ರಾಯಚೂರು ಇವರುಗಳು ಉಪಸ್ಥಿತರಿದ್ದು, ಅವರುಗಳು ಈ ವಸತಿ ನಿಲಯಗಳ ದುಸ್ಥಿತಿಯ ಬಗ್ಗೆ ಯಾವುದೇ ಕ್ರಮ ವಹಿಸದೇ ಸದರಿ ವಸತಿ ನಿಲಯಗಳಿಗೆ ಅನುಕ್ರಮವಾಗಿ ಸರ್ಕಾರದಿಂದ ಬಿಡುಗಡೆಯಾಗಿರುವ ರೂ. 1.00 ಲಕ್ಷ ಹಾಗೂ ರೂ. 0.50 ಲಕ್ಷ ಅನುದಾನವನ್ನು ಸಮರ್ಪಕವಾಗಿ ಮೇಲ್ವಿಚಾರಣೆ ಮಾಡದೆ ಅನುದಾನವನ್ನು ಸಂಸ್ಥೆಗಳಿಗೆ ಬಿಡುಗಡೆ ಮಾಡಿ ಶ್ರೀ ರೇವಣಸಿದ್ದೇಶ್ವರ ಟ್ರಸ್ಟ್ ಹಾಗೂ ಸಂಕಲ್ಪ ಸಂಸ್ಥೆ, ರಾಯಚೂರು ಇವರೊಂದಿಗೆ ಶಾಮೀಲಾಗಿ ಸರ್ಕಾರಿ ಹಣದ ದುರುಪಯೋಗದಲ್ಲಿ ಭಾಗಿಯಾಗಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವ ಹಿನ್ನೆಲೆಯಲ್ಲಿ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ರಾಯಚೂರು ಇವರು ದಿ:7.8.2007 ರ ಆದೇಶದಲ್ಲಿ ಶ್ರೀ ಎಂ.ಎನ್. ನಾಯಕ್, ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿ, ರಾಯಚೂರು ಇವರನ್ನು ಅಮಾನತ್ತಿನಲ್ಲಿಟ್ಟಿರುತ್ತಾರೆ. ಶ್ರೀ ಎಂ.ಎನ್. ನಾಯಕ್, ಜಿಲ್ಲಾ ಅಂಗವಿಕಲರ ಕಲ್ಯಾಣಾಧಿಕಾರಿ, ರಾಯಚೂರು ರವರಿಗೆ ಸಕ್ಷಮ ಪ್ರಾಧಿಕಾರ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಅಧಿಕಾರಿ ಆಗಿರುವುದರಿಂದ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ರಾಯಚೂರು ರವರು ದಿ:7.8.2007 ರಂದು ಹೊರಡಿಸಿರುವ ಆದೇಶವು ಅಸಿಂಧುವಾಗಿರುವುದರಿಂದ ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಯವರು ಹೊರಡಿಸಿರುವ ಆದೇಶವನ್ನು ರದ್ದುಗೊಳಿಸಿ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು ಸಕ್ಷಮ ಪ್ರಾಧಿಕಾರಿಯಾಗಿ ಮೇಲೆ (2)ರಲ್ಲಿ ಓದಲಾದ ದಿ:6.10.2007 ರಂದು ಆದೇಶ ಹೊರಡಿಸಿ ಶ್ರೀ ಎಂ.ಎನ್. ನಾಯಕ್, ಅಂಗವಿಕಲರ ಕಲ್ಯಾಣಾಧಿಕಾರಿ, ರಾಯಚೂರು ಇವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಸದರಿಯವರನ್ನು ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿರುತ್ತಾರೆ. ಶ್ರೀ ಎಂ.ಎನ್. ನಾಯಕ್, ಅಂಗವಿಕಲರ ಕಲ್ಯಾಣಾಧಿಕಾರಿ, ರಾಯಚೂರು ಇವರನ್ನು ಈಗಾಗಲೇ ಅಮಾನತ್ತಿನಲ್ಲಿಟ್ಟಿರುವುದರಿಂದ, ಇನ್ನುಳಿದಂತೆ ಶ್ರೀ ವೈ.ಬಿ. ಶಿಂಧೆ, ಸಹಾಯಕ ನಿರ್ದೇಶಕರು ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆ ಕಾಯ್ದಿರಿಸಿ ಸೇವೆಯಿಂದ ಅಮಾನತ್ತುಗೊಳಿಸಿ ಶ್ರೀ ವೈ.ಬಿ. ಶಿಂಧೆ ಮತ್ತು ಶ್ರೀ ಎಂ.ಎನ್. ನಾಯಕ್ ಇವರುಗಳ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಸರ್ಕಾರವನ್ನು ಕೋರಿದ್ದರು. ಸರ್ಕಾರವು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ವರದಿಯನ್ನು ಪರಿಶೀಲಿಸಿ, ಮೇಲೆ (3) ರಲ್ಲಿ ಓದಲಾದ ದಿ:23.11.2007ರ

ಆದೇಶದಲ್ಲಿ ಶ್ರೀ ವೈ.ಬಿ. ಶಿಂಧೆ, ಸಹಾಯಕ ನಿರ್ದೇಶಕರು ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ–ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆ ಕಾಯ್ದಿರಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(1)(ಎ)ರನ್ವಯ ಅಮಾನತ್ತಿನಲ್ಲಿಡಲಾಗಿತ್ತು.

ಸರ್ಕಾರವು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ವರದಿ/ಶಿಫಾರಸ್ಸಿನ ಅನ್ವಯ ಶ್ರೀ ವೈ.ಬಿ. ಶಿಂಧೆ, ಸಹಾಯಕ ನಿರ್ದೇಶಕರು, ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು ಮತ್ತು ಶ್ರೀ ಎಂ.ಎನ್. ನಾಯಕ್, ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳು, ರಾಯಚೂರು ಇವರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಜರುಗಿಸಲು ತೀರ್ಮಾನಿಸಿ ಮೇಲೆ (4) ರಲ್ಲಿ ಓದಲಾದ ದಿ:30.1.2008 ರಂದು ಸದರಿ ಅಧಿಕಾರಿಗಳಿಗೆ ಕರ್ನಾಟಕ ನಾಗರಿಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರಡಿ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಲಾಗಿರುತ್ತದೆ. ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿ:16.2.2008 ರಂದು ಶ್ರೀ ವೈ.ಬಿ. ಶಿಂಧೆ, ಹಿಂದಿನ ಸಹಾಯಕ ನಿರ್ದೇಶಕರು, ಹಾಗೂ ಪ್ರಭಾರ ಉಪನಿರ್ದೇಶಕರು, ಮಹಿಳಾ ಮತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು(ಅಮಾನತ್ತಿನಲ್ಲಿರುವವರು) ಹಾಗೂ ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ದಿ:21.2.2008 ರಂದು ಶ್ರೀ ಎಂ.ಎನ್. ನಾಯಕ್, ಹಿಂದಿನ ಅಂಗವಿಕಲರ ಕಲ್ಯಾಣಾಧಿಕಾರಿ, ರಾಯಚೂರು ಇವರುಗಳು ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಲಿಖಿತ ಉತ್ತರಗಳಲ್ಲಿ ಅವರುಗಳ ಮೇಲಿನ ಆರೋಪಗಳನ್ನು ಅಲ್ಲಗಳೆದಿದ್ದು, ಅವರ ಉತ್ತರಗಳು ಸಮರ್ಪಕವಾಗಿಲ್ಲವೆಂದು ಮೇಲ್ನೋಟಕ್ಕೆ ಕಂಡು ಬಂದ ಹಿನ್ನೆಲೆಯಲ್ಲಿ ಮೇಲೆ ಕ್ರಮ ಸಂಖ್ಯೆ (7)ರಲ್ಲಿ ಓದಲಾದ ದಿ:17.3.2008ರ ಆದೇಶದಲ್ಲಿ ಸದರಿಯವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಶ್ರೀ ಕುಮಾರಗೌಡ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಬಳ್ಳಾರಿ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಮತ್ತು ಶ್ರೀ ಮುನಿರೆಡ್ಡಿ, ಉಪನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಲಾಗಿದೆ.

ಮೇಲೆ ಕ್ರ.ಸಂ. (8)ರಲ್ಲಿ ಓದಲಾದ ದಿ:20.3.2008 ರ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರ ಕಚೇರಿಯ ಆದೇಶದಲ್ಲಿ ಶ್ರೀ ಎಂ.ಎನ್.ನಾಯಕ್, ಹಿಂದಿನ ಅಂಗವಿಕಲರ ಕಲ್ಯಾಣಾಧಿಕಾರಿ ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆ ಬಾಕಿ ಇರಿಸಿ ಅವರನ್ನು ಸರ್ಕಾರಿ ಸೇವೆಗೆ ಪುನರ್ ಸ್ಥಾಪಿಸಿ ಬಾಲಕರ ಬಾಲಮಂದಿರ, ಗುಲ್ಬರ್ಗಾದಲ್ಲಿನ ಅಧೀಕ್ಷಕರ ಖಾಲಿ ಹುದ್ದೆಗೆ ನೇಮಿಸಲಾಗಿದೆಯೆಂದು ವರದಿಯಾಗಿದೆ.

ಸರ್ಕಾರವು ದಿ:17.3.2008 ರಂದು ಜಂಟಿ ಇಲಾಖಾ ವಿಚಾರಣೆ ನಡೆಸಲು ಹೊರಡಿಸಿರುವ ಆದೇಶದಲ್ಲಿ ಇಲಾಖಾ ವಿಚಾರಣೆ ನಡೆಸುವ ಸ್ಥಳ ಹಾಗೂ ಇಲಾಖಾ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ನಿಗಧಿಪಡಿಸಿರುವ ಶುಲ್ಕದ ಬಗ್ಗೆ ಯಾವುದೇ ಮಾಹಿತಿ ಇಲ್ಲದಿರುವ ಪ್ರಯುಕ್ತ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲು ಸಾಧ್ಯವಾಗುವುದಿಲ್ಲವೆಂದು ತಿಳಿಸುತ್ತಾ, ಶ್ರೀ ಕುಮಾರಗೌಡ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರು ಇಲಾಖಾ ವಿಚಾರಣೆ ನಡೆಸಲು ಸೂಚಿಸಿರುವ ಸರ್ಕಾರದ ಆದೇಶದ ಪ್ರತಿ ಹಾಗೂ ದಾಖಲೆಗಳನ್ನು ಮೇಲೆ ಕ್ರಮ ಸಂಖ್ಯೆ (9)ರಲ್ಲಿ ಓದಲಾದ ದಿ:12.1.2009ರ ಪತ್ರದಲ್ಲಿ ಸರ್ಕಾರಕ್ಕೆ ಹಿಂದಿರುಗಿಸಿರುತ್ತಾರೆ.

ಸರ್ಕಾರವು ಶ್ರೀ ವೈ.ಬಿ. ಶಿಂಧೆ, ಹಿಂದಿನ ಸಹಾಯಕ ನಿರ್ದೇಶಕರು ಹಾಗೂ ಶ್ರೀ ಎಂ.ಎನ್. ನಾಯಕ್ ಹಿಂದಿನ ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳು ಇವರುಗಳ ಸರ್ಕಾರದ ದಿ:30.1.2008ರ ಕಾರಣ ಕೇಳುವ ನೋಟೀಸಿಗೆ ನೀಡಿರುವ ಲಿಖಿತ ಹೇಳಿಕೆಗಳನ್ನು ಮತ್ತೊಮ್ಮೆ ಪರಿಶೀಲಿಸಲಾಗಿ:

(1) ಶ್ರೀ ವೈ.ಬಿ. ಶಿಂಧೆ ಹಿಂದಿನ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ರಾಯಚೂರು, ಇವರು ತಮ್ಮ ಲಿಖಿತ ಹೇಳಿಕೆಯಲ್ಲಿ ಅವರು ತಮ್ಮ ಕರ್ತವ್ಯ ಮೇಲ್ವಿಚಾರಣೆ ಮಾಡುವುದಾಗಿದ್ದು, ತಾವು ಪ್ರಶ್ನಿತ ರೇವಣಸಿದ್ದೇಶ್ವರ ಸಂಸ್ಥೆ, ಬೀದರ್ ಶಾಖೆ, ರಾಯಚೂರು ವಿದ್ಯಾರ್ಥಿ ನಿಲಯ ಹಾಗೂ ಸಂಕಲ್ಪ ಸಂಸ್ಥೆ, ರಾಯಚೂರು ಈ ಎರಡೂ ಸಂಸ್ಥೆಗಳಿಗೆ ಬೇಟಿ ನೀಡಿದಾಗ ಸಮರ್ಪಕವಾಗಿ ನಡೆಯುತ್ತಿದ್ದವು ಎಂದು, ನಂತರ ಜಿಲ್ಲಾ ಕಛೇರಿಯಲ್ಲಿ ಹಲವು ಹುದ್ದೆಗಳು ಖಾಲಿ ಇದ್ದುದ್ದರಿಂದ, ವಿಷಯ ನಿರ್ವಾಹಕರು ಇಲ್ಲದೇ ಇದ್ದುದ್ದರಿಂದ, ತಮ್ಮ ಕಾರ್ಯಭಾರ ಜಾಸ್ತಿಯಾಗಿದ್ದುದ್ದರಿಂದ, ಅಂಗವಿಕಲರ ಕಲ್ಯಾಣ ಇಲಾಖೆಯ ಯೋಜನೆಗಳಿಗೆ ಹೆಚ್ಚಿನ ಕಾಲಾವಕಾಶ ಸಾಧ್ಯವಾಗದ ಕಾರಣ ಸಂಬಂಧಪಟ್ಟ ಅಂಗವಿಕಲರ ಕಲ್ಯಾಣಾಧಿಕಾರಿಗಳು ಸಮರ್ಪಕ ನಿರ್ವಹಣೆ ಜವಾಬ್ದಾರಿ ಹೊಂದಿದ್ದಾರೆಂದು ತಿಳಿಸಿರುತ್ತಾರೆ.

(2) ಶ್ರೀ ಎಂ.ಎನ್. ನಾಯಕ್, ಹಿಂದಿನ ಜಿಲ್ಲಾ ಅಂಗವಿಕಲರ ಹಾಗೂ ಹಿರಿಯ ನಾಗರೀಕರ ಕಲ್ಯಾಣಾಧಿಕಾರಿಗಳು, ರಾಯಚೂರು ಇವರು ತಮ್ಮ ಲಿಖಿತ ಹೇಳಿಕೆಯಲ್ಲಿ ಅವರ ವಿರುದ್ಧ ಮಾಡಿರುವ ಆಪಾದನೆಗಳು ಕೆಲಸದ ಒತ್ತಡದಿಂದ ಹಾಗೂ ಕಣ್ತಪ್ಪಿನಿಂದ ಏನಾದರೂ ತಪ್ಪು ಆಗಿರಬಹುದೆಂದು ಹಾಗೂ ಇನ್ನು ಮುಂದೆ ಈ ರೀತಿ ಆಗದಂತೆ ಜಾಗ್ರತೆ ವಹಿಸಿ ಕಾರ್ಯ ನಿರ್ವಹಿಸುವುದಾಗಿ ತಿಳಿಸಿರುತ್ತಾರೆ. ಇದರಿಂದ ಅವರು ತಮ್ಮ ವಿರುದ್ಧ ಇರುವ ಆಪಾದನೆಗಳನ್ನು ಪರೋಕ್ಷವಾಗಿ ಒಪ್ಪಿಕೊಂಡಂತಾಗುತ್ತದೆ.

ಸರ್ಕಾರವು ಶ್ರೀ ವೈ.ಬಿ. ಶಿಂಧೆ ಹಿಂದಿನ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು, ಹಾಗೂ ಶ್ರೀ ಎಂ.ಎನ್. ನಾಯಕ್, ಹಿಂದಿನ ಜಿಲ್ಲಾ ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಕಲ್ಯಾಣಾಧಿಕಾರಿಗಳು, ರಾಯಚೂರು ಇವರುಗಳು ಸರ್ಕಾರದ ದಿ:30.1.2008ರ ಕಾರಣ ಕೇಳುವ ನೋಟೀಸಿಗೆ ನೀಡಿರುವ ಉತ್ತರಗಳನ್ನು ಕೂಲಂಕುಷವಾಗಿ ಪರಿಶೀಲಿಸಿದೆ. ಶ್ರೀ ವೈ.ಬಿ. ಶಿಂಧೆ, ಹಿಂದಿನ ಸಹಾಯಕ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು, ಇವರ ಕರ್ತವ್ಯ ಕೇವಲ ಮೇಲ್ವಿಚಾರಣೆ ಮಾಡುವುದಾಗಿದ್ದು, ಇವರು ನೇರವಾಗಿ ಜವಾಬ್ದಾರರಾಗಿರುವುದು ಕಂಡು ಬರುವುದಿಲ್ಲವಾದ್ದರಿಂದ ಇವರ ವಿರುದ್ಧದ ಶಿಸ್ತು ಕ್ರಮವನ್ನು ಕೈಬಿಡಲು ತೀರ್ಮಾನಿಸಿ ಮೇಲೆ ಕ್ರಮ ಸಂಖ್ಯೆ (10)ರಲ್ಲಿ ಓದಲಾದ ದಿ:24.9.2009ರ ಆದೇಶದಲ್ಲಿ ಶ್ರೀ ವೈ.ಬಿ. ಶಿಂಧೆ, ಹಿಂದಿನ ಸಹಾಯಕ ನಿರ್ದೇಶಕರು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ರಾಯಚೂರು, ಇವರ ಹೆಸರನ್ನು ಇಲಾಖಾ ವಿಚಾರಣೆಯಿಂದ ಕೈಬಿಟ್ಟಿದೆ. ಹಾಗೂ ಸದರಿ ಆಪಾದನೆಗಳು ಮುಖ್ಯವಾಗಿ ಅಂಗವಿಕಲರ ಹಾಗೂ ಹಿರಿಯ ನಾಗರೀಕ ಕಲ್ಯಾಣ ಇಲಾಖೆಯ ಯೋಜನೆಗಳಿಗೆ ಸಂಬಂಧಿಸಿರುವ ಹಿನ್ನಲೆಯಲ್ಲಿ ಶ್ರೀ ಎಂ.ಎನ್. ನಾಯಕ್, ಹಿಂದಿನ ಜಿಲ್ಲಾ ಅಂಗವಿಕಲರ ಹಾಗೂ ಹಿರಿಯ ನಾಗರೀಕರ ಕಲ್ಯಾಣಾಧಿಕಾರಿ ಇವರು ತಮ್ಮ ಕಾರ್ಯಭಾರದ ಒತ್ತಡದಿಂದ ಹಾಗೂ ಕಣ್ತಪ್ಪಿನಿಂದ ಏನಾದರೂ ತಪ್ಪು ಆಗಿರಬಹುದೆಂದು ತಿಳಿಸಿದ್ದು, ಅವರು ತಮ್ಮ ವಿರುದ್ಧ ಇರುವ ಆಪಾದನೆಗಳನ್ನು ಪರೋಕ್ಷವಾಗಿ ಒಪ್ಪಿಕೊಂಡಂತೆ ಆಗಿರುವುದರಿಂದ ಇವರ ವಿರುದ್ದದ ಆಪಾದನೆಗಳ ಬಗ್ಗೆ ಕೆ.ಸಿ.ಎಸ್. (ಸಿಸಿಎ) ನಿಯಮಗಳು 1957ರ ನಿಯಮ 11 ರಡಿ ಇಲಾಖಾ ವಿಚಾರಣೆ ನಡೆಸಲು ತೀರ್ಮಾನಿಸಿ ಶ್ರೀಮತಿ ಎಸ್.ಎಂ. ಚಂದ್ರ, ಹಿಂದಿನ ಉಪನಿರ್ದೇಶಕರು, ಅಂಗವಿಕಲರ ಹಾಗೂ ಹಿರಿಯ ನಾಗರೀಕರ ಕಲ್ಯಾಣ ಇಲಾಖೆ, ಹಾಲಿ ಉಪಯೋಜನಾ ನಿರ್ದೇಶಕರು (ಸ್ತ್ರೀ ಶಕ್ತಿ ಶಾಖೆ) ನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ಮತ್ತು ಶ್ರೀಮತಿ ಮಾನಸ ದೇವಿ ಕಛೇರಿ ವ್ಯವಸ್ಥಾಪಕರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಮಮಇ 383 ಎಸ್‌ಜೆಡಿ 2009, ಬೆಂಗಳೂರು, ದಿನಾಂಕ:25ನೇ ಸೆಪ್ಟೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಎಂ.ಎನ್. ನಾಯಕ್, ಹಿಂದಿನ ಜಿಲ್ಲಾ ಅಂಗವಿಕಲ ಕಲ್ಯಾಣಾಧಿಕಾರಿಗಳು, ರಾಯಚೂರು ಹಾಲಿ ಶಿಶು ಅಭಿವೃದ್ಧಿ ಯೋಜನಾಧಿಕಾರಿಗಳು, ಶಿರಹಟ್ಟಿ ಇವರು ಎಸಗಿರುವ ಕರ್ತವ್ಯ ಲೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಹಿಡಿಯಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 11 ರಡಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಿದೆ. ಈ ಪ್ರಕರಣದಲ್ಲಿ ಶ್ರೀಮತಿ ಎಸ್.ಎಂ. ಚಂದ್ರ ಉಪಯೋಜನಾ ನಿರ್ದೇಶಕರು (ಸ್ತ್ರೀ ಶಕ್ತಿ ಶಾಖೆ) ನಿರ್ದೇಶಕರ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರನ್ನು ಇದೇ ನಿಯಮ 11 (2)ರ ಮೇರೆಗೆ ವಿಚಾರಣಾಧಿಕಾರಿಗಳನ್ನಾಗಿ ಮತ್ತು ಶ್ರೀಮತಿ ಮಾನಸದೇವಿ, ಕಛೇರಿ ವ್ಯವಸ್ಥಾಪಕರು, ಅಂಗವಿಕಲರ ಮತ್ತು ಹಿರಿಯ ಕಲ್ಯಾಣ ನಿರ್ದೇಶನಾಲಯ ಇವರನ್ನು ಇದೇ ನಿಯಮ 11(5)ರ ಮೇರೆಗೆ ಮಂಡನಾಧಿಕಾರಿಯನ್ನಾಗಿ ನೇಮಿಸಿ ಆದೇಶಿಸಲಾಗಿದೆ.

ವಿಚಾರಣಾಧಿಕಾರಿಗಳು ಈ ವಿಚಾರಣೆಯನ್ನು ಕೂಡಲೇ ಪ್ರಾರಂಭಿಸಿ 3 ತಿಂಗಳ ಒಳಗಾಗಿ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2313

**ಆರ್. ನರಸಿಂಹಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ–2 (ಪ್ರಭಾರ)

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** 2009–10ನೇ ಸಾಲಿಗೆ ಡಿಆರ್‌ಡಿಎ ಆಡಳಿತ ಯೋಜನೆಯ ರಾಜ್ಯದ ಪಾಲಿನ ಒಂದನೇ ಕಂತಿನ ಉಳಿಕೆ ಅನುದಾನವನ್ನು ರಾಜ್ಯದ 26 ಜಿಲ್ಲಾ ಪಂಚಾಯಿತಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**

1. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ : ಆರ್–18014 :03 :2009–10–ಡಿಆರ್‌ಡಿಎ (ಎಸ್‌ಆರ್ ನಂ. 10) ದಿನಾಂಕ :13.4.2009, (ಎಸ್‌ಆರ್ ನಂ. 32) ದಿನಾಂಕ :19.6.2009, (ಎಸ್‌ಆರ್ ನಂ.36) ದಿನಾಂಕ :3.7.2009.
2. ರಾಜ್ಯ ಸರ್ಕಾರದ ಆದೇಶ ಸಂಖ್ಯೆ :ಗ್ರಾಅಪ 1 ಎಸ್‌ಜೆವೈ (ಡಿಆರ್‌ಡಿಎ)2009, ಬೆಂಗಳೂರು, ದಿನಾಂಕ :20.5.2009, 15–7–2009 ಮತ್ತು 4.8.2009.
3. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ :ಆರ್–18014 :03 :2008/ಡಿಆರ್‌ಡಿಎ (ಎಸ್‌ಎಲ್ ನಂ 45) ದಿನಾಂಕ 10.8.2009.

**ಪ್ರಸ್ತಾವನೆ:**

2009–10ನೇ ಸಾಲಿನಲ್ಲಿ ಕೇಂದ್ರ ಗ್ರಾಮೀಣಾಭಿವೃದ್ಧಿ ಮಂತ್ರಾಲಯ, ನವದೆಹಲಿ ಇವರು ಡಿಆರ್‌ಡಿಎ ಆಡಳಿತ ಯೋಜನೆಗೆ ಓದಲಾಗಿದೆ (1)ರಲ್ಲಿ ಒಂದನೇ ಕಂತಿನ ಭಾಗಶಃ ಅನುದಾನ ರೂ. 4,29,00,000 ಗಳನ್ನು ರಾಯಚೂರು ಜಿಲ್ಲಾ

ಪಂಚಾಯತಿಯನ್ನು ಹೊರತುಪಡಿಸಿ ಉಳಿದ 28 ಜಿಲ್ಲಾಪಂಚಾಯತಿಗಳಿಗೆ ಬಿಡುಗಡೆ ಮಾಡಿದ್ದು, ಇದರನ್ವಯ ರಾಜ್ಯ ಸರ್ಕಾರವು ಉಲ್ಲೇಖಿತ (2)ರ ಆದೇಶಗಳಲ್ಲಿ ಮೊದಲನೇ ಕಂತಿನ ಅನುದಾನ ರೂ. 1,43,00,000 ಬಿಡುಗಡೆ ಮಾಡಲಾಗಿತ್ತು. ಕೇಂದ್ರ ಸರ್ಕಾರ ಉಲ್ಲೇಖಿತ (3)ರ ಪತ್ರದಲ್ಲಿ ರಾಜ್ಯದ 26 ಜಿಲ್ಲಾ ಪಂಚಾಯತಿಗಳಿಗೆ ಒಂದನೇ ಕಂತಿನ ಉಳಿಕೆ ಅನುದಾನ ರೂ. 99,69,000 ಗಳನ್ನು ಬಿಡುಗಡೆ ಮಾಡಿದೆ. ಇದರನ್ವಯ ರಾಜ್ಯ ಸರ್ಕಾರವು 26 ಜಿಲ್ಲಾ ಪಂಚಾಯತಿಗಳಿಗೆ ರೂ. 33,22,000 ಗಳನ್ನು ಬಿಡುಗಡೆ ಮಾಡಬೇಕಾಗಿದೆ. ಆದುದರಿಂದ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 1 ಎಸ್‌ಜಿವೈ (ಡಿಆರ್‌ಡಿಎ) 2009, ಬೆಂಗಳೂರು, ದಿನಾಂಕ:5ನೇ ಅಕ್ಟೋಬರ್, 2009**

ರಾಜ್ಯ ಸರ್ಕಾರವು, ಡಿಆರ್‌ಡಿಎ ಆಡಳಿತ ಯೋಜನೆಯಡಿ ಅನುಬಂಧದಲ್ಲಿ ತೋರಿಸಿರುವ ರಾಜ್ಯದ 26 ಜಿಲ್ಲಾ ಪಂಚಾಯತಿಗಳಿಗೆ ಮೊದಲನೇ ಕಂತಿನ ಉಳಿಕೆ ಅನುದಾನ ರೂ. 33,22,000 ಗಳನ್ನು (ರೂ. ಮೂವತ್ತಮೂರು ಲಕ್ಷದ ಇಪ್ಪತ್ತೆರಡು ಸಾವಿರ ಮಾತ್ರ) ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

**ಷರತ್ತುಗಳು:**

ಡಿಆರ್‌ಡಿಎ ಆಡಳಿತ ಯೋಜನೆಯ ಕೈಪಿಡಿಯ ಮಾರ್ಗಸೂಚಿಯಂತೆ ಈ ಆದೇಶದಲ್ಲಿ ಬಿಡುಗಡೆ ಮಾಡಿದ ಪಂಚಾಯತಿಗಳ ಅನುದಾನವನ್ನು ಜಿಲ್ಲಾ ಪಂಚಾಯತಿಗಳ ಸಿಬ್ಬಂದಿಗಳ ವೇತನ ಹಾಗೂ ಸಾದಿಲ್ವಾರು ವೆಚ್ಚಗಳಿಗೆ ಮಾತ್ರ ಉಪಯೋಗಿಸುವುದು. ಇನ್ನಾವುದೇ ಉದ್ದೇಶಗಳಿಗೆ ಉಪಯೋಗಿಸತಕ್ಕದ್ದಲ್ಲ.

ಅನುದಾನದ ಮಾದರಿಯು ಕೇಂದ್ರ ಮತ್ತು ರಾಜ್ಯಸರ್ಕಾರಗಳ ನಡುವೆ 75:25 ರ ಅನುಪಾತದಲ್ಲಿರುತ್ತದೆ.

ಯೋಜನೆಯ ವೆಚ್ಚವನ್ನು ಲೆಕ್ಕ ಶೀರ್ಷಿಕೆ :"2515 ಇತರೆ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳು 00–196–ಜಿಲ್ಲಾ ಪಂಚಾಯತ್‌ಗಳಿಗೆ ಸಹಾಯ–6–ಜಿಲ್ಲಾ ಪಂಚಾಯತ್–06–ಡಿಆರ್‌ಡಿಎ ಆಡಳಿತಾತ್ಮಕ ವೆಚ್ಚ–(ಕೇಂದ್ರ ಪುರಸ್ಕೃತ ಯೋಜನೆ) 2009–2010 (2515–00–196–6–06)" ರಡಿ ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆಎಫ್‌ಡಿ 1 ಜಡ್‌ಪಿಎ 2007 (ಪಿ2) ದಿನಾಂಕ:26.4.2007 ರನ್ವಯ ಜಿಲ್ಲಾ ಪಂಚಾಯತ್ ನಿಧಿ–1ಕ್ಕೆ ಜಮೆ ಮಾಡಿಕೊಂಡು ಪೇಯಿಸ್ ರಸೀದಿಯ ಮೂಲಕ ಜಿಲ್ಲಾ ಪಂಚಾಯತಿ ನಿಧಿಯಿಂದ ಅನುದಾನವನ್ನು ಖಜಾನೆಯಿಂದ ಪಡೆದುಕೊಂಡು ಕಾರ್ಯಕ್ರಮದ ಅನುಷ್ಠಾನಕ್ಕಾಗಿ ತೆರೆದಿರುವ ಬ್ಯಾಂಕ್ ಖಾತೆಗೆ ಜಮೆ ಮಾಡಿಕೊಂಡು ವೆಚ್ಚವನ್ನು ಭರಿಸತಕ್ಕದ್ದು.

ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನದ ಆಂತರಿಕ ಲೆಕ್ಕ ಪರಿಶೋಧನೆಯನ್ನು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಮಾಡುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ ಮುಖ್ಯ ಲೆಕ್ಕಾಧಿಕಾರಿಗಳು ಆಯಾ ತಿಂಗಳ ಪ್ರಗತಿ ವರದಿ ಹಾಗೂ ಹುದ್ದೆವಾರು ವಿವರಗಳನ್ನು ಮುಂದಿನ ತಿಂಗಳ 5ನೇ ತಾರೀಖಿನೊಳಗೆ ನಿರ್ದೇಶಕರು [ಸ್ವ ಉಕಾ] ಹಾಗೂ ಪದ ನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳ, ಮುಖ್ಯ ಲೆಕ್ಕಾಧಿಕಾರಿಗಳು ಹಣ ಉಪಯೋಗ ಪ್ರಮಾಣ ಪತ್ರ ಹಾಗೂ ಲೆಕ್ಕ ಪರಿಶೋಧನಾ ವರದಿಗಳನ್ನು ನಿರ್ದೇಶಕರು [ಸ್ವ ಉಕಾ] ಹಾಗೂ ಪದ ನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬಹುಮಹಡಿ ಕಟ್ಟಡ, ಕರ್ನಾಟಕ ಸರ್ಕಾರ, ಬೆಂಗಳೂರು ಇವರಿಗೆ ತಪ್ಪದೇ ಕಳುಹಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರು, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ, ಕರ್ನಾಟಕ ಸರ್ಕಾರ ಇವರ ಸಹಮತಿ ಸಂಖ್ಯೆ:ಗ್ರಾಅಪ 257 ಪಿಬಿಎಸ್ 2009 ದಿನಾಂಕ:3.10.2009ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ.ಎ. ಮೇಘಣ್ಣವರ**

ನಿರ್ದೇಶಕರು (ಸ್ವ.ಉ.ಕಾ) ಹಾಗೂ ಪ.ನಿ.

ಸರ್ಕಾರದ ಜಂಟಿ ಕಾರ್ಯದರ್ಶಿ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

**ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 1 ಎಸ್ ಜಿವೈ (ಡಿಆರ್‌ಡಿಎ) 2009, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್, 2009**

**(ಅನುಬಂಧ)**

(ರೂ.ಗಳಲ್ಲಿ)

| ಕ್ರ. ಸಂ. | ಜಿಲ್ಲಾ ಪಂಚಾಯತಿ | ಜಿ.ಪ. ಕೋಡ್ | ಡಿ.ಡಿ.ಓ. ಕೋಡ್ | ಕೇಂದ್ರ ಸರ್ಕಾರ ಬಿಡುಗಡೆ ಮಾಡಿದ ಮೊದಲನೇ ಕಂತಿನ ಉಳಿಕೆ ಅನುದಾನ | ರಾಜ್ಯ ಸರ್ಕಾರವು ಬಿಡುಗಡೆ ಮಾಡುತ್ತಿರುವ ಮೊದಲನೇ ಕಂತಿನ ಉಳಿಕೆ ಅನುದಾನ |
|---|---|---|---|---|---|
| 1 | ಬಾಗಲಕೋಟೆ | 461 | 2900ZZ0001 | 4,18,000 | 1,39,000 |

| | | | | | |
|---|---|---|---|---|---|
| 2 | ಬೆಂಗಳೂರು (ಗ್ರಾ) | 402 | 0300ZZ8001 | 3,38,000 | 1,13,000 |
| 3 | ಬೆಂಗಳೂರು ನಗರ | 401 | 0100ZZ8001 | 3,38,000 | 1,13,000 |
| 4 | ಬೆಳಗಾವಿ | 413 | 2200ZZ0002 | 4,18,000 | 1,39,000 |
| 5 | ಬಳ್ಳಾರಿ | 418 | 3400ZZ0001 | 4,18,000 | 1,39,000 |
| 6 | ಬೀದರ್ | 419 | 3800ZZ5701 | 3,38,000 | 1,13,000 |
| 7 | ಬಿಜಾಪುರ | 414 | 2800ZZ9152 | 3,38,000 | 1,13,000 |
| 8 | ಚಾಮರಾಜನಗರ | 456 | 1000ZZ0001 | 3,38,000 | 1,13,000 |
| 9 | ಚಿಕ್ಕಮಗಳೂರು | 408 | 1800ZZ0017 | 4,18,000 | 1,39,000 |
| 10 | ಚಿತ್ರದುರ್ಗ | 403 | 1600ZZ0001 | 4,18,000 | 1,39,000 |
| 11 | ದಕ್ಷಿಣ ಕನ್ನಡ | 409 | 1900ZZ0047 | 3,38,000 | 1,13,000 |
| 12 | ದಾವಣಗೆರೆ | 451 | 1700ZZ0002 | 4,18,000 | 1,39,000 |
| 13 | ಧಾರವಾಡ | 415 | 2500ZZ8798 | 3,38,000 | 1,13,000 |
| 14 | ಗದಗ್ | 462 | 2600ZZ0001 | 3,38,000 | 1,13,000 |
| 15 | ಗುಲ್ಬರ್ಗಾ | 417 | 3200ZZ0003 | 4,18,000 | 1,39,000 |
| 16 | ಹಾಸನ | 410 | 1300ZZ0003 | 4,18,000 | 1,39,000 |
| 17 | ಹಾವೇರಿ | 463 | 2700ZZ0001 | 4,18,000 | 1,39,000 |
| 18 | ಕೊಡಗು | 411 | 1200ZZ0001 | 3,38,000 | 1,13,000 |
| 19 | ಕೋಲಾರ | 404 | 0700ZZ8002 | 3,38,000 | 1,13,000 |
| 20 | ಕೊಪ್ಪಳ | 466 | 1500ZZ0010 | 3,38,000 | 1,13,000 |
| 21 | ಮಂಡ್ಯ | 412 | 1100ZZ0001 | 4,18,000 | 1,39,000 |
| 22 | ಮೈಸೂರು | 407 | 0900ZZ0001 | 4,18,000 | 1,39,000 |
| 23 | ಶಿವಮೊಗ್ಗ | 405 | 1400ZZ0002 | 4,18,000 | 1,39,000 |
| 24 | ತುಮಕೂರು | 406 | 0800ZZ0001 | 4,18,000 | 1,39,000 |
| 25 | ಉಡುಪಿ | 457 | 2000ZZ0001 | 3,39,000 | 1,13,000 |
| 26 | ಉತ್ತರ ಕನ್ನಡ | 416 | 3000ZZ0080 | 4,78,000 | 1,59,000 |
| | ಒಟ್ಟು | | | 99,69,000 | 33,22,000 |

**ಪಿ.ಎ. ಮೇಘಣ್ಣವರ**
ಪಿ.ಆರ್. 2325
ನಿರ್ದೇಶಕರು (ಸ್ವ.ಉ.ಕಾ) ಹಾಗೂ ಪ.ನಿ.
ಸರ್ಕಾರದ ಜಂಟಿ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

## ವಸತಿ ಸಚಿವಾಲಯ

**ವಿಷಯ :** ಪ್ರವಾಹಪೀಡಿತರಿಗೆ ಮನೆ ನಿರ್ಮಿಸಿಕೊಳ್ಳಲು ನಿವೇಶನ ಖರೀದಿಗಾಗಿ ಅನುದಾನ ಬಿಡುಗಡೆ ಕುರಿತು.

**ಓದಲಾಗಿದೆ :** ಅನಧಿಕೃತ ಟಿಪ್ಪಣಿ ಸಂಖ್ಯೆ ಎಫ್‌ಡಿ/682/ವೆಚ್ಚ–9/2008 ದಿನಾಂಕ :13.10.2009

**ಪ್ರಸ್ತಾವನೆ:**

ಉತ್ತರ ಕರ್ನಾಟಕ ಜಿಲ್ಲೆಗಳಲ್ಲಿ ದಿನಾಂಕ:29.9.2009ರಿಂದ 4.10.2009ರವರೆಗೆ ಸುರಿದ ಧಾರಕಾರ ಮಳೆಯಿಂದಾಗಿ ಉಂಟಾದ ನೆರೆಹಾವಳಿಯಿಂದ ಲಕ್ಷಾಂತರ ಜನರ ಮನೆಗಳು, ಬೆಳೆ ಮತ್ತು ಸಾರ್ವಜನಿಕ ಆಸ್ತಿಪಾಸ್ತಿ ತೀವ್ರ ಹಾನಿಗೊಳಗಾಗಿವೆ. ಪ್ರವಾಹಪೀಡಿತರನ್ನು ತಾತ್ಕಾಲಿಕವಾಗಿ ನಿರ್ಮಿಸಿದ ಶೆಡ್ಡುಗಳಲ್ಲಿ ವ್ಯವಸ್ಥೆ ಮಾಡಲಾಗಿದ್ದು, ಮಣ್ಣಿನ ಇಟ್ಟಿಗೆಗಳಿಂದ ನಿರ್ಮಿಸಲಾದ ಈ ಮನೆಗಳ ದುರಸ್ಥಿ ಸಾಧ್ಯವಾಗುತ್ತಿಲ್ಲ ಹಾನಿಗೊಳಗಾದ ಮನೆಗಳು ಹೆಚ್ಚಾಗಿ ತಗ್ಗು ಪ್ರದೇಶದಲ್ಲಿರುವುದರಿಂದ ಅವರಿಗೆ

ಪ್ರತ್ಯೇಕವಾಗಿ ಸುರಕ್ಷಿತ ಸ್ಥಳದಲ್ಲಿ ಮನೆಗಳನ್ನು ನಿರ್ಮಿಸಲು ಸೂಕ್ತ ನಿವೇಶನಗಳ ಅವಶ್ಯಕತೆ ಇರುತ್ತದೆ. ಈ ಹಿನ್ನೆಲೆಯಲ್ಲಿ ಸರ್ಕಾರವು ಹೆಚ್ಚು ಹಾನಿಗೊಳಗಾದ ರಾಜ್ಯದ ಹತ್ತು ಜಿಲ್ಲೆಗಳಲ್ಲಿ ಮನೆಗಳ ನಿರ್ಮಾಣಕ್ಕಾಗಿ ನಿವೇಶನಗಳನ್ನು ರಚಿಸಲು ಖಾಸಗಿ ಜಮೀನು ಖರೀದಿಗಾಗಿ ತಕ್ಷಣವೇ ಅನುದಾನ ಬಿಡುಗಡೆ ಮಾಡಲು ಈ ಕೆಳಗಿನಂತೆ ಆದೇಶವನ್ನು ಪ್ರಸ್ತಾಪಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 16 ಹೆಚ್ಎವೈ 2009, ಬೆಂಗಳೂರು, ದಿನಾಂಕ:14ನೇ ಅಕ್ಟೋಬರ್, 2009**

ಇತ್ತೀಚೆಗೆ ಉತ್ತರ ಕರ್ನಾಟಕದಲ್ಲಿ ಉಂಟಾದ ನೆರೆಹಾವಳಿಯಿಂದ ಮನೆಗಳನ್ನು ಕಳೆದುಕೊಂಡು ತೊಂದರೆಗೊಳಗಾದವರಿಗೆ ಮನೆಗಳ ನಿರ್ಮಾಣಕ್ಕಾಗಿ ನಿವೇಶನಗಳಿಗಾಗಿ ಜಮೀನು ಖರೀದಿಸಲು ಅತಿ ಹೆಚ್ಚು ಹಾನಿಗೊಳಗಾದ ಈ ಕೆಳಕಾಣಿಸಿದ ಹತ್ತು ಜಿಲ್ಲೆಗಳಿಗೆ ಪ್ರತಿ ಜಿಲ್ಲೆಗೆ 2.00 ಕೋಟಿ ರೂ.ಗಳಂತೆ ಒಟ್ಟು 20.00 ಕೋಟಿ ರೂ.ಗಳನ್ನು (ಇಪ್ಪತ್ತು ಕೋಟಿ ರೂ.ಗಳು ಮಾತ್ರ) ಲೆಕ್ಕ ಶೀರ್ಷಿಕೆ 2216–03–102–0–01 (ಯೋಜನೆ) ಅಡಿಯಲ್ಲಿ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮಕ್ಕೆ, ಸರ್ಕಾರದ ಉಪ ಕಾರ್ಯದರ್ಶಿ, ವಸತಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ಪಡೆಯಲು, ಬಿಡುಗಡೆ ಮಾಡಲಾಗಿದೆ.

| | | | | | | | |
|---|---|---|---|---|---|---|---|
| 1 | ಬಳ್ಳಾರಿ | 2 | ಕೊಪ್ಪಳ | 3 | ರಾಯಚೂರು | 4 | ಗುಲ್ಬರ್ಗಾ |
| 5 | ಬಿಜಾಪುರ | 6 | ಬಾಗಲಕೋಟೆ | 7 | ಗದಗ | 8 | ಧಾರವಾಡ |
| 9 | ಬೆಳಗಾವಿ | 10 | ಹಾವೇರಿ | | | | |

(2) ನೆರೆಹಾವಳಿಯಿಂದ ತೊಂದರೆಗೊಳಗಾದವರಿಗೆ ಮನೆ ನಿರ್ಮಾಣಕ್ಕಾಗಿ ಹಂಚುವ ನಿವೇಶನಗಳಿಗಾಗಿ ಜಮೀನು ಖರೀದಿಸಲು ಮಾತ್ರ ಈ ಅನುದಾನವನ್ನು ಉಪಯೋಗಿಸಿಕೊಳ್ಳತಕ್ಕದ್ದು.

(3) ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಎಫ್ ಡಿ/682/ವೆಚ್ಚ–9/2008 ದಿನಾಂಕ:13.10.2009ರಲ್ಲಿ ಸಹಮತಿಸಿದ ಮೇರೆಗೆ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2360

**ಕೆ.ಆರ್. ವಲ್ಲೂರ**

ಪೀಠಾಧಿಕಾರಿ– 2, ವಸತಿ ಇಲಾಖೆ

**ವಿಷಯ :** ಶಹಪುರ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.
**ಓದಲಾಗಿದೆ :** ಸರ್ಕಾರದ ಆದೇಶ ಸಂ.ವಇ 42 ಹೆಚ್ಎಂ 1999 ದಿನಾಂಕ :10.5.2000.

**ಪ್ರಸ್ತಾವನೆ:**

ಸರ್ಕಾರವು ರಾಜ್ಯದ ವಿವಿಧ ನಗರ ಸ್ಥಳೀಯ ಸಂಸ್ಥೆಗಳಲ್ಲಿ ನಗರ/ಪಟ್ಟಣ ಆಶ್ರಯ ಸಮಿತಿಗಳನ್ನು ಮೇಲೆ ಓದಲಾದ ಸರ್ಕಾರದ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ರಚಿಸಲು ಆದೇಶಿಸಿದೆ. ಕೆಲವು ಸ್ಥಳೀಯ ಸಂಸ್ಥೆಗಳಲ್ಲಿ ಅಧಿಕಾರೇತರ ಸದಸ್ಯರ ನಾಮನಿರ್ದೇಶನವಾಗಬೇಕಾಗಿದ್ದು, ಇಂಥ ಸ್ಥಳಿಯ ಸಂಸ್ಥೆಗಳಲ್ಲಿ ನಗರ/ಪಟ್ಟಣ ಆಶ್ರಯ ಸಮಿತಿ ಕಾರ್ಯನಿರ್ವಹಿಸುತ್ತಿಲ್ಲ ನಗರ ಆಶ್ರಯ ಯೋಜನೆಯಡಿಯಲ್ಲಿ ಫಲಾನುಭವಿಗಳ ಆಯ್ಕೆ ತಕ್ಷಣವೇ ಪ್ರಾರಂಭವಾಗ ಬೇಕಾಗಿರುವುದರಿಂದ, ಅಧಿಕಾರೇತರ ಸದಸ್ಯರ ನಾಮನಿರ್ದೇಶನ ಬಾಕಿ ಇಟ್ಟು ಈ ಕೆಳಗಿನಂತೆ ನಗರ/ಪಟ್ಟಣ ಆಶ್ರಯ ಸಮಿತಿ ರಚಿಸಿ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 18 ಹೆಚ್ಎಎಸ್ 2008, ಬೆಂಗಳೂರು, ದಿನಾಂಕ:16ನೇ ಸೆಪ್ಟೆಂಬರ್, 2009**

ಶಹಪುರ ಪಟ್ಟಣ ಆಶ್ರಯ ಸಮಿತಿಯನ್ನು ಈ ಕೆಳಕಂಡಂತೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪುನರ್ರಚಿಸಲಾಗಿದೆ.

| | | |
|---|---|---|
| 1 | ವಿಧಾನ ಸಭಾ ಕ್ಷೇತ್ರವನ್ನು ಪ್ರತಿನಿಧಿಸುವ ವಿಧಾನ ಸಭಾ ಸದಸ್ಯರು | ಅಧ್ಯಕ್ಷರು |
| 2 | ಆ ಪ್ರದೇಶದ ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 3 | ಸ್ಥಳೀಯ ಸಂಸ್ಥೆಯ ಮಹಾಪೌರರು/ಅಧ್ಯಕ್ಷರು ಅಥವಾ ಅವರ ಪ್ರತಿನಿಧಿ | ಸದಸ್ಯರು |
| 4 | ಸಂಬಂಧಪಟ್ಟ ಕಂದಾಯ ವಿಭಾಗದ ಉಪ ವಿಭಾಗಾಧಿಕಾರಿ | ಸದಸ್ಯರು |
| 5 | ತಾಲ್ಲೂಕಿನ ತಹಶೀಲ್ದಾರರು | ಸದಸ್ಯರು |
| 6 | ತಾಲ್ಲೂಕು ಪಂಚಾಯತ್‌ನ ಕಾರ್ಯನಿರ್ವಾಹಕ ಅಧಿಕಾರಿ | ಸದಸ್ಯರು |
| 7 | ಸ್ಥಳೀಯ ಸಂಸ್ಥೆಯ ಮುಖ್ಯಾಧಿಕಾರಿ ಅಥವಾ ಆಯುಕ್ತರು | ಸದಸ್ಯ ಕಾರ್ಯದರ್ಶಿ |

ಸಮಿತಿಯ ಅಧಿಕಾರ ಮತ್ತು ಕರ್ತವ್ಯಗಳ ಬಗ್ಗೆ ಮೇಲೆ ಓದಲಾದ ಸರ್ಕಾರದ ಆದೇಶದಲ್ಲಿ ನೀಡಿದ ಮಾರ್ಗದರ್ಶಿಕೆಗಳನ್ನು ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2359

**ಜಿ.ವಿ. ಕೊಂಗವಾಡ**

ಸರ್ಕಾರದ ಕಾರ್ಯದರ್ಶಿ, ವಸತಿ ಇಲಾಖೆ